# ಮಾನಸಿ

ತಿಂಗಳ ಪತ್ರಿಕೆ.

ವಿಶೇಷ ಸಂಚಿಕೆ

ನವೆಂಬರ್ ಡಿಸೆಂಬರ್ ೧೯೯೦

---

ಸ್ತ್ರೀಯರೆ ಮನೆಗೆ ಮರಳಿ........?

ಸ್ತ್ರೀಯರ ಅಭಿವೃದ್ಧಿಗೆ ಇಂದಿನ ಮಾಧ್ಯಮಗಳು ಪೂರಕವಾಗಿವೆಯೇ?

ಬಯಲು

1990 ಹೆಣ್ಣು ಮಗುವಿನ ವರ್ಷ

ಸೀತೆ ಭೂಮಾತೆಗೆ

ಕದ ಮುಚ್ಚಿದ ಹಾದಿ

---

# ಮಾನಸ

ಸಂಪುಟ : ೩ ಸಂಚಿಕೆ : ೧೧

ನವೆಂಬರ್–ಡಿಸೆಂಬರ್ ೧೯೯೦

**ಸಂಪಾದಕೀಯ ಮಂಡಳಿ:**
ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ದು. ಸರಸ್ವತಿ,
ಸವಿತ ಎ., ಗೀತಾ ಜಿ. ಎಸ್., ಗಾಯತ್ರಿ ವಿ.

**ಸಲಹೆ—ಸಹಕಾರ**
ಇಳಾವಿಜಯ

**ವಿಳಾಸ "ಮಾನಸ" ತಿಂಗಳ ಪತ್ರಿಕೆ**
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—**560067**

**ಬಿಡಿಪ್ರತಿ :2** ರೂ.
**ಸೂಚನೆ :** ವಾರ್ಷಿಕ ಚಂದಾ :20ರೂ.
ಆಜೀವ ಚಂದಾ : **250**ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ ......

# ಸ್ತ್ರೀಯರೇ ಮನೆಗೆ ಮರಳಿ......–

ಶ್ರೀ ರಂಗನಾಥ ಮಿಶ್ರಾ

"ಇತ್ತೀಚಿಗೆ ಸುಪ್ರೀಂ ಕೋರ್ಟ್ ನ್ಯಾಯಾಧೀಶರಾದ ಶ್ರೀಯುತ ರಂಗನಾಥರವರು, "ಸ್ತ್ರೀಯರು ಪುರುಷರೊಡನೆ ಸ್ಪರ್ಧಿಸದೆ ಮನೆಗಳಿಗೆ ಹಿಂತಿರುಗಬೇಕು" ಎಂದು ಹೇಳಿಕೆ ನೀಡಿದರು. ನಂತರ ಸ್ತ್ರೀ ಸಂಘಟನೆಗಳ ವಿರೋಧಾತ್ಮಕ ಪ್ರತಿಕ್ರಿಯೆಯಿಂದಾಗಿ ಈ ಹೇಳಿಕೆಯನ್ನು ಗೌರವಯುತವಾಗಿ ಹಿಂತೆಗೆದುಕೊಂಡಾಗ್ಯೂ ಸ್ತ್ರೀಯರ ಬದುಕು ಮನೆಗೇ ಸೀಮಿತವಾಗಿರಬೇಕೆಂಬುದನ್ನೇನೂ ಅವರು ನಿರಾಕರಿಸಿದಂತೆ ಕಾಣುವುದಿಲ್ಲ. ಇದು ನಮ್ಮ ಬದುಕು, ಸಮಾಜದ ವಿಡಂಬನೆ. ಈ ಸಂದರ್ಭದಲ್ಲಿ ರಂಗನಾಥ ಮಿಶ್ರಾ ಹಾಗೂ ಇಂತಹ ಆಲೋಚನೆಯುಳ್ಳವರ ಪ್ರತಿಕ್ರಿಯೆಗೆ ವಿರೋಧಾತ್ಮಕವಾಗಿ ಈ ಲೇಖನವನ್ನು ಪ್ರಕಟಿಸುತ್ತಿದ್ದೇನೆ.

ವಿಜಯಾ

ವ್ಯವಸ್ಥೆ-ಸಂಪ್ರದಾಯಗಳನ್ನು ವಿರೋಧಿಸುವ ಪ್ರವೃತ್ತಿಯನ್ನು ಒಂದು "ದೊಡ್ಡ" ಸಮಾಜ ಯಾವಾಗಲೂ ಗುಮಾನಿಯಿಂದಲೇ ನೋಡುತ್ತದೆ. ಯಥಾಸ್ಥಿತಿಯನ್ನು ಒಪ್ಪಿಕೊಳ್ಳದ ಯಾವುದೇ ವಿಚಾರಗಳನ್ನು ಸುಲಭವಾಗಿ ಸ್ವೀಕರಿಸಲಾಗದೆ ತಿಲ್ಲಣಿಸುತ್ತ ತಡೆಯೊಡ್ಡುತ್ತದೆ. ಈ ಹೊತ್ತು ಜನಪರವಾದ ಅನೇಕ ಹೋರಾಟಗಳನ್ನು ಹತ್ತಿಕ್ಕುವ ಪ್ರಯತ್ನಗಳ ಹಿಂದೆ ಇದೇ ಧೋರಣೆಯನ್ನು ಕಾಣಬಹುದಾಗಿದೆ.

ಕಾರ್ಮಿಕರು ಬೆಂಬಲಿಸಿದ ಮಹಿಳೆಯೊಬ್ಬರು ಅಧಿಕ ಮತ ಗಳಿಸಿ ಗೆದ್ದ ವರದಿಯೊಂದು ದಕ್ಷಿಣ ಐರ್ಲೆಂಡಿನ ಇತ್ತೀಚಿನ ರಾಜಕೀಯ ಸುದ್ದಿ. ಆಕೆ ಮೇರಿ ರಾಬರ್ಸನ್. ಈ ಆಯ್ಕೆಯಿಂದಾಗಿ ಈಗ ಆ ದೇಶದ ಅಧ್ಯಕ್ಷೆ. ಸಾಮಾಜಿಕ ನ್ಯಾಯಗಳಿಗಾಗಿ, ಹಕ್ಕುಗಳಿಗಾಗಿ ಆಕೆ ಬಹುವಿಧದಲ್ಲಿ ಹೋರಾಡಿದವರು. ಈಕೆಯ ಈ ಗೆಲುವಿನ ಹಿಂದೆ ಕಾರ್ಮಿಕ ವರ್ಗದ ಹಿತಾಸಕ್ತಿಯ ಅಗತ್ಯವನ್ನು ಅರ್ಥಮಾಡಿಕೊಂಡ ಜನತೆ ಬಂಡವಾಳಶಾಹಿಗಳ ನೀತಿಯನ್ನು ತಿರಸ್ಕರಿಸಿರುವುದು ಸ್ಪಷ್ಟವಾಗಿದೆ. ಆಕೆ ತನ್ನ ಗೆಲುವಿನ ನಂತರದ ಭಾಷಣದಲ್ಲಿ ಅದಕ್ಕೆ ಕಾರಣರಾದ ಕಾರ್ಮಿಕ ಬಾಂಧವರಿಗೆ ಕೃತಜ್ಞತೆ ಹೇಳುತ್ತಾ ಮುಖ್ಯವಾಗಿ ಗೆಲುವಿಗೆ ಕಾರಣರಾದ "ಐರ್ಲೆಂಡಿನ ಮಹಿಳೆಯರು ತೊಟ್ಟಿಲು ತೂಗುವುದರ ಬದಲು ವ್ಯವಸ್ಥೆಯನ್ನು ತೂಗಲು ಹೊರಟಿದ್ದಾರೆ" — ಎಂದಿದ್ದಾರೆ. ಈ ಮಾತಿನ ಹಿಂದೆ ಇರುವ ಧ್ವನಿಯನ್ನು ಗಮನಿಸಿ. ಇಡೀ ವಿಶ್ವದ ಎಲ್ಲ ಪಟ್ಟಭದ್ರ ಹಿತಾಸಕ್ತಿಗಳನ್ನು ಅಣಕಿಸುತ್ತ. ಹೆಣ್ಣುಮಕ್ಕಳ ಹೃದಯವನ್ನು ತಟ್ಟಬೇಕಾದ ಮಾತು.

ಭಾರತದ ಸಂದರ್ಭದಲ್ಲಿ ಮಹಿಳೆಯ ಸ್ಥಾನವನ್ನು ಬಲ್ಲೆವು. ವಿದ್ಯಾಭ್ಯಾಸದ ಫಲವಾಗಿ ಮತ್ತು ದೇಶದ ಆರ್ಥಿಕ ಸ್ಥಿತಿಯ ಏರುಪೇರುಗಳ ಫಲವಾಗಿ ಆಕೆ ನೇರವಾಗಿ ಉತ್ಪಾದನಾ ವ್ಯವಸ್ಥೆಯೊಳಗೆ ತನ್ನ ದುಡಿಮೆಯನ್ನು ಬಳಸಬೇಕಾಗಿ ಬಂದಿದೆ. ಹೀಗಾಗಿ ದುಡಿಯುವ ಮಹಿಳೆಯರ ಸಂಖ್ಯೆ ಜಾಸ್ತಿಯಾಗಿದೆ. ಪರಿಣಾಮವಾಗಿ ಕುಟುಂಬದ ಒಳಗಡೆ, ಶ್ರಮ ಮತ್ತು ಜವಾಬ್ದಾರಿಗಳ ಹಂಚಿಕೆಯ ವಿಧಾನವೂ ಬದಲಾಗುತ್ತಿದೆ. ಸ್ತ್ರೀ ವಿದ್ಯಾಭ್ಯಾಸದಿಂದ ಹೊಸ ಎಚ್ಚರಗಳೂ ಮೂಡತೊಡಗಿದೆ. ಬಹುಕಾಲದ ದಾಸ್ಯ-ಗೋಪ್ಯಗಳ ಅನಂತರ ದೊರೆತ ಸ್ವಾತಂತ್ರ್ಯ, ಅದು ಅತಿ ಸೀಮಿತವೇ ಆದರೂ ಈ ಸ್ವಾತಂತ್ರ್ಯವನ್ನು ಬಳಸಿಕೊಳ್ಳುವಾಗ ಸ್ವಲ್ಪಮಟ್ಟಿಗೆ "ಅಭಿಮಾನ" ಹೆಚ್ಚಿನಳತೆಗೆ ಏರಿದ್ದರೆ ತೀರಾ ಸಹಜ. ಇಲ್ಲಿ ಆಗೆ ಈಗ ವಿಲಾಸಪ್ರಿಯತೆಯೂ ಇರಬಾರದೆಂದಿಲ್ಲ. ಕೌಟುಂಬಿಕ ಜೀವನದಲ್ಲಿ ಸಹಜವಾಗಿ ಸಿಗುತ್ತಿದ್ದ "ಆತ"ನ ನೆಮ್ಮದಿಯು ಇದರಿಂದಾಗಿ ಭಂಗವಾಗುತ್ತಿದ್ದಂತೆ ಭಾಸವೂ ಆಗಬಹುದು. ಇದಕ್ಕೆಲ್ಲ ವಿದ್ಯಾವತಿಯರ ಆಧುನಿಕ ಚಿಂತನೆಗಳು

ಮತ್ತು ಗೌಪ್ಯದಿಂದ ಹೊರಬಂದ ಸ್ವತಂತ್ರ ಮನೋಭಾವಗಳು ಕಾರಣವೆಂದು ಪುರುಷ ಸಮಾಜ ಭಾವಿಸಿಬಿಡುತ್ತದೆ. ಆದರೆ ಹಾಗೆ ಅವರು ತಮ್ಮ ಕುಟುಂಬದ ನೆಮ್ಮದಿ-ಭರವಸೆಗಳನ್ನು ಪಡೆಯುತ್ತಿದ್ದುದರ ಹಿಂದೆ ಎಂತಹ ಕ್ರೌರ್ಯ—ಶೋಷಣೆ ಇತ್ತು, ಅದನ್ನೆಲ್ಲ ಸಹ ಮಾನವಜೀವಿಯೊಬ್ಬಳು ಹಲ್ಲುಕಚ್ಚಿ ಸಹಿಸಬೇಕಾಗಿತ್ತು ಎಂಬುದನ್ನು ಮರೆಯುತ್ತಾರೆ.

ನಮ್ಮೆದುರು ಇರುವ ಅದೆಷ್ಟೋ ಪ್ರಗತಿಪರ ಮನೋಧರ್ಮದವರು ಎಂದುಕೊಂಡ ಗಣ್ಯರೂ ಸಹ, ಅವರಿಗೆ ಸಮಸ್ಯೆಯ ವಿಭಿನ್ನ ಆಯಾಮಗಳ ಪರಿಚಯವಿದ್ದಾಗಲೂ ಜಡವಾದ ಮನೋಧರ್ಮವುಳ್ಳವರಾಗಿರುತ್ತಾರೆ ಮತ್ತು ಅವರು ತಮ್ಮ ಕಾಲದ ಮೌಲ್ಯ ವ್ಯವಸ್ಥೆಯನ್ನು ಸುಪ್ತ ಚಿತ್ತದ ಹಂತದಲ್ಲಿಯೇ ಒಪ್ಪಿಕೊಂಡೂ ಇರುತ್ತಾರೆ. ಇಂಥವರು ತಮ್ಮ ಈ ಭಾವನೆಗಳನ್ನು ಹತ್ತಿಕ್ಕಿ ಸೋಗಿನ ಮುಖವಾಡ ಹಾಕುವುದು ಸಹಜ. ಅವೆಲ್ಲವನ್ನೂ ತೆರೆದು ಮುಕ್ತವಾಗಿ ಅಭಿವ್ಯಕ್ತಿಸಲು ಸೂಕ್ತ ಅವಕಾಶ-ಪರಿಸರ ದೊರೆತಾಗ ಅವರು ಬೆತ್ತಲಾಗುತ್ತಾರೆ. ಆಳದಲ್ಲಡಗಿದ್ದ ವಿಕೃತ ಮನಸ್ಸು ಗರಿಗೆದರಿಕೊಂಡು ಮನಸೋ ಇಚ್ಛೆ ವಿಹರಿಸತೊಡಗುತ್ತದೆ.

ಇಂಥ ಒಂದು ಸ್ಪಷ್ಟ ಉದಾಹರಣೆ ಈಚೆಗೆ ನ್ಯಾಯಾಧೀಶರಾದ ಶ್ರೀ ರಂಗನಾಥ ಮಿಶ್ರ ಅವರು ಆಡಿರುವ ಮಾತುಗಳು. ಹಲವಾರು ಕಾರಣಗಳ ಹಿನ್ನೆಲೆಯಲ್ಲಿ ಕೋರ್ಟಿನ ಮೆಟ್ಟಿಲು ಹತ್ತಿದ್ದ ನನ್ನ ಗೆಳತಿಯರನೇಕರು ತಮಗಾದ ಅನುಭವಗಳನ್ನು ಅಲ್ಲಿಯ ಪ್ರಶ್ನೋತ್ತರಗಳು ಕೊಡುವ ಮಾನಸಿಕ ಹಿಂಸೆಯನ್ನು ಕುರಿತು ಹೇಳಿದ್ದುಂಟು. ಗಂಡನ ಹಿಂಸೆ-ಕಾರ್ಯ ತಾಳಲಾಗದೆ ವಿಚ್ಛೇದನ ಕೋರಿ ಕೋರ್ಟಿಗೆ ಹೋಗಿದ್ದ ಒಬ್ಬ ಗೆಳತಿ ನ್ಯಾಯಮೂರ್ತಿಗಳು ಮತ್ತ ಧರ್ಮದ ಹಿನ್ನೆಲೆಯಲ್ಲಿ ಮಹಿಳೆಯ ಸ್ಥಾನ ಗೌರವ ಯಾವುದು ಎಂದು ಒಂದು ಪುಟ್ಟ ಭಾಷಣವನ್ನೇ ಮಾಡಿ ಎಚ್ಚರಿಸಿದ್ದನ್ನು ಹೇಳಿದಳು. ಇಂಥವರ ಎದುರು ನಿಂತ ಮಹಿಳೆ ಹೇಗೆ ಕುಗ್ಗಿಹೋಗುತ್ತಾಳೆಂದು ವರ್ಣಿಸಿದ್ದಳು. ಆ ಎಲ್ಲವನ್ನೂ ಈಗ ಮೆಲುಕು ಹಾಕಿದರೆ ಶ್ರೀ ಮಿಶ್ರಾ ಅವರ ಅಭಿಪ್ರಾಯಗಳ ಹಿಂದೆ ಇರುವ ಅಂಥದೊಂದು ಧಾರ್ಮಿಕ ಮನಸ್ಸು ಎದುರಾಗುತ್ತದೆ, ಅಂಥ ಮನಸ್ಸುಗಳು ಎಂದಿಗೂ ಹೊಸ ಚಿಂತನೆ, ಹೊಸ ಬದುಕು, ಸಹಬಾಳ್ವೆಯನ್ನು ಒಪ್ಪುವುದಿರಲಿ ಹಾಗೊಂದು ಸಮಾಜವನ್ನು ಎಂದೂ ಯಾರೂ ಕಟ್ಟಬಾರದೆಂದು ತಡೆ ಗೋಡೆಗಳನ್ನೂ ಕಟ್ಟಲು ಹೋಗುತ್ತಿರುತ್ತಾನೆ. ಇಲ್ಲಿ ಆತಂಕವೆಂದರೆ ಅವರು ನಮಗೆ ನ್ಯಾಯಕೊಡುವ ಸ್ಥಾನದಲ್ಲಿದ್ದಾರೆಂಬುದು, ಇದು ನಮ್ಮ ಬದುಕಿನ ವಿರೋಧಾಭಾಸ!

ಶ್ರೀಯುತ ಮಿಶ್ರಾ ಅವರಿಗೆ ಬ್ರಹ್ಮಕುಮಾರಿಯರು ವೇದಿಕೆ ಕಲ್ಪಿಸಿದರು, ಅಲ್ಲಿಯ ಆಧ್ಯಾತ್ಮ ಚಿಂತನೆ ಮಿಶ್ರಾ ಅವರಿಗೆ ಪ್ರಿಯವಾದಿರಬೇಕು. ಸಮಾಜದಲ್ಲಿ ಸಮನಾಗಿ ನಿಲ್ಲುತ್ತೇವೆನ್ನದೆ, ಪೈಪೋಟಿ ಕೊಡದೆ ಶುಭ್ರ ಶ್ವೇತ ವಸ್ತ್ರಧಾರಿಣಿಯಾಗಿ ದೈವ ಚಿಂತನೆ, ಮೋಕ್ಷ ಚಿಂತನೆಯನ್ನು ಸ್ತ್ರೀ ಮಾಡಿದರೆ ಇವರವರ ಸ್ಥಾನಗಳಿಗೆ ಅಭದ್ರತೆ ಇಲ್ಲವಷ್ಟೇ. ಅಂತೇ ಗೃಹಿಣಿಯ ಕರ್ತವ್ಯದಾಚೆಗೆ, ಇವರ ಧರ್ಮಶಾಸ್ತ್ರಗಳು ಹೇಳಿರುವಂತೆ ಸ್ತ್ರೀಯರಿಗೆ ಮೋಕ್ಷ ನಿಷೇಧದ ನಿಯಮವನ್ನು ಉಲ್ಲಂಘಿಸಿ ತಪಸ್ಸನ್ನಾಚರಿಸುತ್ತಾ ಅವರವರ ಕ್ಷೇತ್ರದಲ್ಲೂ ಅವು ಉಲ್ಲಂಘನೆಗಳೇ ಆದರೂ ಅನಪೇಕ್ಷಣೀಯ ಆಗಲಿಲ್ಲ. ಅದು ನೇರವಾಗಿ ಸಮಾಜದ ಮುಖ್ಯ ಸ್ಥಾನಗಳಿಗೆ ಪೈಪೋಟಿ ಅಲ್ಲವಾದ್ದರಿಂದ ಸಹನೀಯ. ಮತ್ತು ಕಣ್ಣು-ಕಿವಿಗೂ ತಂಪು-ಇಂಪು ಆದ ದೃಶ್ಯ. (ಬ್ರಹ್ಮಕುಮಾರಿಯರ ಈಶ್ವರೀ ಸಮಾಜವನ್ನು ನಾನು ಟೀಕಿಸುತ್ತಿಲ್ಲ. ಅದು ಅವರವರ ನಂಬಿಕೆ-ಸ್ವಾತಂತ್ರ್ಯ.) ಕುಮಾರಿಯರೂ ಬ್ರಹ್ಮರ ಹಿಂದೆ ಸಾಗುವವರಾದ್ದರಿಂದ ಅದೂ ಹಿತಕರ. ಅಂತೇ ಮಿಶ್ರಾ ಮಹೋದಯರು ತಂಪಾಗಿ ಮಾತಾಡಿದ್ದು ಮತ್ತು ಆಧುನಿಕ ಮಹಿಳೆಯರಿಂದಾಗುತ್ತಿರುವ ಅಪಚಾರದಿಂದ ಒಟ್ಟು ವ್ಯವಸ್ಥೆಯ ಸೂತ್ರ ಎಲ್ಲಿ ಕಡಿದು ಬೀಳುತ್ತದೋ ಎಂಬ ಆತಂಕದಲ್ಲಿ ಗಂಡು-ಹೆಣ್ಣು ದೈವ ಸೃಷ್ಟಿಯಲ್ಲಿ ಒಂದೇ ಅಲ್ಲ. ಮಹಿಳೆ ಎಚ್ಚೆತ್ತಾಗ ಪ್ರಪಂಚ ಎತ್ತರಕ್ಕೇರುವುದಿಲ್ಲ. ಆಕೆ ಇದ್ದಲ್ಲೇ ಇದ್ದು "ಸ್ತ್ರೀ" ಮಾತ್ರ ಆದರೆ ವಿಶ್ವ ಎತ್ತರಕ್ಕೇರುತ್ತದೆ — ಎಂಬ ಆಣಿಮುತ್ತುಗಳನ್ನು ಉದುರಿಸಿ, ಈಗಾಗಲೇ ಆಕೆ ನಡೆದುಬಂದ ದಾರಿ ಬಹಳ ಉದ್ದವಾಯಿತು. ಈಗ ತ್ವರೆಯಲ್ಲಿ ಹಿಂದಕ್ಕೆ ಹೋಗಬೇಕು ಎಂದೂ ಅಪ್ಪಣೆ ಕೊಡಿಸಿದ್ದಾರೆ. ಬಹುವೇಗದ ಹನುಮಂತನ ಹಾಗೆ ಮೆಚ್ಚುಗೆಗೆ ಉಬ್ಬಿಬಿಡಬಹುದಾದ ಹೆಣ್ಣು

ಹೃದಯವನ್ನು ಪುರುಷನಿಗಿಂತ ನೂರುಪಟ್ಟು ಹೆಚ್ಚಿನ ಗೌರವ ಸ್ಥಾನ ನನಗಿದೆ ಎಂದು ಹೇಳಿ ಮೆಚ್ಚಿಸಿಯೂ ಇದ್ದಾರೆ. ಈಗಾಗಲೇ ಎತ್ತರದಲ್ಲಿರುವ ಹೆಣ್ಣು ಸಮಾನತೆಯನ್ನು ಕೇಳುವುದು ಎಂದರೆ ಕೆಳಗಿಳಿದು ಬಂದಂತೆ. ಇದು ಆಕೆಯ ಅಧಃಪತನ ಉತ್ಥಾನ ಅಲ್ಲ ಎಂಬುದವರ ವಾದ. ಅವರದೇ ವಾಕ್ಯಗಳನ್ನು ಉದ್ಧರಿಸುವುದಾದರೆ, "....ಸ್ತ್ರೀಯರು ಈ ವಾಹಿನಿಯೊಳಗೇ ಸೇರಿ ಹೋಗಬೇಕು. ಇದನ್ನು ಮೀರಿ ಮಹಿಳೆಯರು ೨ಅಡಿಯಾಗಲಿ, ೫ಅಡಿ, ಅಥವಾ ಹತ್ತಡಿಯಾಗಲಿ ಬೆಳೆಯುವುದು ನಮಗೆ ಬೇಕಿಲ್ಲ. ಈಗಿರುವ ಸ್ಥಿತಿಯಲ್ಲೇ ಇರುವುದರೊಂದಿಗೆ: ಜನಾಂಗದಲ್ಲಿ ಪ್ರೀತಿಯ ಅಲೆ ಉಕ್ಕಿಹರಿಯಲು ಕಾರಣರಾಗಬೇಕು........" ಎಂದಿದ್ದಾರೆ. ಆದ್ದರಿಂದಲೇ ಹೆಣ್ಣುಮಕ್ಕಳು ಹಿಂದೆ ಸರಿಯಬೇಕು, ಮನೆಗಳಿಗೆ ತೆರಳಬೇಕು. ಆರ್ಥಿಕ ಅಗತ್ಯಗಳಿವೆಯಾದರೆ ದುಡಿಯಬೇಕು ಅದಕ್ಕಾಗಿ ಹೆಚ್ಚಿನ ಶ್ರಮ ಹಾಕಲಿ (ಮನೆಯ ಕರ್ತವ್ಯದ ಜೊತೆಗೆ!) ಎಲ್ಲ ಹಂತದಲ್ಲೂ ಪುರುಷನೊಂದಿಗೆ ಸ್ಪರ್ಧಿಸಬಾರದು. ಹೆಣ್ಣು ಗಂಡಿನ ನಡುವೆ ಇರುವ ದುಡಿಮೆಯ ಅಂತರವನ್ನು ಸಮಾನತೆಯನ್ನು ಕೇಳುವುದರಿಂದ ಸಾಧಿಸಲಾಗುವುದಿಲ್ಲ. ಹೀಗೆ ಸಮಾನತೆಗಾಗಿ ಧಾವಿಸುವುದರಿಂದಾಗಿ ಪ್ರೀತಿ ಸಾಯುತ್ತದಂತೆ. ಗಂಡಾಗಲಿ, ಹೆಣ್ಣಾಗಲೀ ಸುಖವಾಗಿರಲು ಇದರಿಂದಾಗಿ ತಡೆಯಂತೆ. ಆದ್ದರಿಂದ ಹೆಣ್ಣು ಇನ್ನೂ ಎತ್ತರದ ಸ್ಥಾನಕ್ಕಾಗಿ ಹೋರಾಡಬೇಕು (ಪ್ರಾಯಶಃ ಮೋಕ್ಷ, ದೈವಸನ್ನಿಧಿ ಇರಬೇಕು) ಆಕ್ರೋಶ — ಆವೇಶಗಳಿಂದಲೇ ಈ ಮುತ್ತಿನಂಥ ಮಾತುಗಳನ್ನು ಉದುರಿಸಿದ ಮಹನೀಯರಿಗೆ ತಮ್ಮ ಸಂಪ್ರದಾಯಬದ್ಧ ಸಮಾಜ, ಮುಖ್ಯವಾಗಿ ವೇಗವಾಗಿ ಅಕ್ಷರಸ್ಥರಾಗಿ ಎಲ್ಲ ಕ್ಷೇತ್ರಗಳನ್ನೂ ಪ್ರತಿನಿಧಿಸುತ್ತಿರುವ ಸ್ತ್ರೀ ಎಲ್ಲಿ ತನ್ನ ಕುರ್ಚಿಗೂ ಕುತ್ತಾಗುವಳೋ ಎಂಬ ಆತಂಕವೂ ಇರಬಹುದೆ? ನನ್ನೆದುರು ಯಾವುದೇ ತಗಾದೆ ಬಂದರು ನಾನು ಸಂವಿಧಾನದ ೩ನೇ ವಿಭಾಗದಲ್ಲಿರುವುದಕ್ಕಿಂತ ಹೆಚ್ಚಿನದನ್ನು ಕೊಡಲಾರೆ ಎಂದಿರುವ ಮಿಶ್ರಾ ಅವರಿಗೆ ಸಂವಿಧಾನದ ೩ನೆಯ ಭಾಗದಲ್ಲಿರುವ ಮಹಿಳೆಯರ ಮೂಲಭೂತ ಹಕ್ಕುಗಳ ಬಗೆಗಿನ ವಿವರಗಳು ಒಂದು ಕಾಲದ ದೌರ್ಬಲ್ಯವನ್ನು ಎತ್ತಿಹಿಡಿಯುತ್ತದೆ, ಕಾಲ ಬದಲಾದಂತೆ ದೇಶದ ಆರ್ಥಿಕ— ಸಾಮಾಜಿಕ ಬದಲಾವಣೆಯ ಹಿನ್ನೆಲೆಯಲ್ಲಿ ಕೆಲವಾದರೂ ಅನಿವಾರ್ಯ ಬದಲಾವಣೆಗಳು ಆಗಬೇಕಾಗುತ್ತದೆ. ಇಂಥಲ್ಲಿ ಅಗತ್ಯ ಕಂಡರೆ ಸಂವಿಧಾನದ ಚೌಕಟ್ಟು ಹಾಕುವುದು ಮನುಷ್ಯನ ಹಿತಾಸಕ್ತಿಯನ್ನು ಕಾಪಾಡಲು ಬಯಸುವವನ ಹಿರಿಮೆ ಎಂಬುದು ತಿಳಿಯದ ಮಾತೇನಲ್ಲ.

ಮಿಶ್ರಾ ಅವರು ಈ ಹಿಂದೆ ತೆಗೆದುಕೊಂಡ ಅನೇಕ ತೀರ್ಮಾನಗಳು ಜನಪರವಾಗಿದ್ದವು ಎಂದು ಬಲ್ಲವರು ಹೇಳುತ್ತಾರೆ. ಆ ವಿವರಗಳನ್ನು ಇಲ್ಲಿ ಚರ್ಚಿಸುವುದು ಅನಗತ್ಯ. ಪ್ರಸ್ತುತ ಸಂದರ್ಭದಲ್ಲಿಯ ಅವರ ಮಾತುಗಳು ಯಾವುದೇ ಹೃದಯವಂತ ವ್ಯಕ್ತಿಯನ್ನು ಆಘಾತಕ್ಕೀಡು ಮಾಡುತ್ತವೆ. ಹಿರಿಯ ಸ್ಥಾನದಲ್ಲಿರುವವರೊಬ್ಬರು ಹೀಗೆ ಹೇಳಿದಾಗ ನಾವು ನಾಚಿ ನಿಲ್ಲುವಂತಾಗುತ್ತದೆ. ಇಂಥ ಒಂದು ಮಹತ್ವದ ಮಾತು ಎದುರಿಗೆ ಇದ್ದಾಗಲೂ ಮಾಧ್ಯಮಗಳು ಇದನ್ನು ಸರಿಯಾಗಿ ಎತ್ತಿಹಿಡಿಯಲಿಲ್ಲ ಎಂಬುದು ಮತ್ತಷ್ಟು ಆಶ್ಚರ್ಯ — ಆತಂಕಗಳಿಗೆ ದಾರಿಯಾಗುತ್ತದೆ. ಹೆಣ್ಣಿಗೆ ತಾಯಿ, ಹೆಂಡತಿ, ತಂಗಿ—ಅಕ್ಕನಾಗಿ ಬಹುದೊಡ್ಡ ಪೂಜನೀಯ ಸ್ಥಾನವನ್ನು ಕೊಡಲಾಗಿದೆ ಎಂಬ ಹಳೆಯ ವಾದವನ್ನು ಸೊಗಸಾಗಿ ಉಲಿದ ನ್ಯಾಯಮೂರ್ತಿಗಳ ಕಂಠನಾದಕ್ಕೆ ದೇಶದ ಸಂಪ್ರದಾಯವಾದಿಗಳೆಲ್ಲ, ಮನೆಯ ಮೂಲಭೂತವಾದಿಗಳೆಲ್ಲ ತಲೆಬಾಗಿದ್ದಾರೆಂಬುದು ಇನ್ನೂ ಈ ದೇಶದ ಮಹಿಳೆ ಹೋರಾಡಬೇಕಾದ, ಹಾದು ಬರಬೇಕಾದ ದಾರಿಯ ಕ್ಲಿಷ್ಟತೆ-ದೂರಗಳನ್ನು ಕುರಿತು ಎಚ್ಚರಿಸುತ್ತದೆ. ಇಂಥ ಕತ್ತಲೆಯ ಮನಸ್ಸುಗಳ ಆಳಕ್ಕೆ ವಿಚಾರದ ಬೆಳಕನ್ನು ತುರುಕುವುದು ಸಾಧ್ಯವಾದೀತೆ?

ಕೆಲವು ಮಹಿಳಾ ನ್ಯಾಯವಾದಿನಿಯರು ಈ ಉಪನ್ಯಾಸವನ್ನು ಧ್ವನಿಮುದ್ರಿಸಿಕೊಂಡದ್ದು, ಈ ಸಂಬಂಧವಾಗಿ ಕೆಲವು ಸಂಘಟನೆಗಳು ವಿರೋಧಿಸಿದ್ದು ಸರಿಯಷ್ಟೇ. ಇದರಿಂದಾಗಿ ಮನಸ್ಸಿನೊಳಗಿನ ಮಾತನ್ನ ಉದುರಿಸಿ ನಿಶ್ಚಿಂತರಾಗಿದ್ದ ಶ್ರೀ ಮಿಶ್ರಾ ಅವರು ಮತ್ತೆ ಉದ್ವಿಗ್ನ-ಭಯಗಳಿಂದಾಗಿ ಪ್ರತಿ ಹೇಳಿಕೆ ಕೊಡಬೇಕಾಯಿತು. ಅವರು ತಮ್ಮೆಲ್ಲ ಮಾತುಗಳನ್ನು ಹಿಂತೆಗೆದುಕೊಂಡಿದ್ದಾರಂತೆ. ಮತ್ತೆ ಅವರು ಬರೆದ ಪತ್ರದಲ್ಲಿ. ಸಂವಿಧಾನದಲ್ಲಿಯ ನಿಯಮದಂತೆ ನ್ಯಾಯ ದೊರಕಿಸುತ್ತೇನೆಂದೇ ಹೇಳಿದ್ದೇನೆ. ಅದಕ್ಕಿಂತಲೂ ಹೆಚ್ಚಿನ ರಕ್ಷಣೆಯ ಅಗತ್ಯ ಆಕೆಗೆ ಇದೆ ಎಂದೂ

ಟಿಲ್ಲ ಎಂದಿದ್ದಾರೆ. ಮುಂದುವರೆದು ಪರಂಪರಾಗತವಾಗೇ ಬಹುದೊಡ್ಡ ಗೌರವ ಮತ್ತು ಪುರುಷನಿಗಿಂತ ಎತ್ತರದಲ್ಲಿ ಸ್ತ್ರೀಯರ ಸ್ಥಾನವನ್ನು ನೀಡಲಾಗಿದೆ. ಅನಂತರದ ದಿನಗಳಲ್ಲಿ ಯಾವುದೋ ಲೋಪವಾಗಿ ಸಮಾಜದಲ್ಲಿ ಆಕೆಯ ಸ್ಥಾನ ಕೆಳಕ್ಕಿಳಿದಿದೆ ಎಂದು ಕೊರಗಿದ್ದಾರೆ. ಅಲ್ಲದೆ, "ಪ್ರಕೃತಿಯ ಅಂಶಗಳೊಂದಿಗೆ ತಾಯ್ತನವನ್ನೂ ಪ್ರತಿನಿಧಿಸುವ ಮಹಿಯರ ಬಗ್ಗೆ ನನಗೆ ಈ ಹಿಂದೆಯೂ ಅತ್ಯುನ್ನತವಾದ ಗೌರವವಿತ್ತು, ಮುಂದಿನ ದಿನಗಳಲ್ಲೂ ಸಹ ಇರುತ್ತದೆ, ಅವರಿಗಾಗಿ, ಅವರ ಜೀವನದ ಸ್ಥಿತಿಗತಿಗಳನ್ನು ಸುಧಾರಿಸುವುದಕ್ಕಾಗಿಯೂ ಹೋರಾಟ ಮುಂದುವರೆಸುತ್ತಲೇ ಇರುತ್ತೇನೆ" ಎಂದೂ ಹೇಳಿದ್ದಾರೆ.

ಪ್ರತಿಭಟಿಸಿದ್ದ ಮಹಿಳಾ ಸಂಘಟನೆಯ ಕಾರ್ಯದರ್ಶಿ ಶ್ರೀಮತಿ ಬೃಂದಾ ಕಾರಂತ್ ಅವರಿಗೆ ಈ ಉತ್ತರ ಬರೆದ ಮಿಶ್ರಾ ಅವರ ಪತ್ರಕ್ಕೆ ಆಕೆ ಇಂಥ ಘಟನೆಗಳು ಮಿಶ್ರಾ ಅವರೇ ಅಲ್ಲದೆ ಎತ್ತರದ ಸ್ಥಾನದಲ್ಲಿರುವ ಇತರರಿಗೂ ಪಾಠವಾಗಬೇಕು ಮತ್ತು ಸಮಾನತೆಯ ಹಕ್ಕುಗಳನ್ನು ಸ್ತ್ರೀಯರಿಂದ ಕಿತ್ತುಕೊಳ್ಳುವ ಯಾವುದೇ ಚಿಂತನೆಯನ್ನು ಸಹಿಸಲಾರೆವು ಎಂದಿದ್ದಾರೆ.

ಮಿಶ್ರಾ ಅವರ ಉತ್ತರದಲ್ಲಿ ಸಮಾಧಾನ ಕಾಣಿಸುತ್ತಿದೆಯೇ? ಮುಖ್ಯವಾಗಿ ಅವರ ಮನಸ್ಸು ಏನು ಎನ್ನುವುದನ್ನು ಅವರ ಹಿಂದಿನ ಭಾಷಣದಲ್ಲಿ ಸ್ಪಷ್ಟವಾಗಿ ಕಂಡಾಗಿದೆ. ಪ್ರತಿಭಟನೆಗೆ ಬಂದ ಉತ್ತರದಲ್ಲೂ ಆ ಅಭಿಪ್ರಾಯ ಬದಲಾಗಿದೆ ಅನ್ನಿಸುವುದಿಲ್ಲ. ಅದನ್ನೇ ಕೊಂಚ ನವಿರಾಗಿ ಹೇಳಿದ್ದಾರೆ. ಈ ಬಗ್ಗೆ ತೃಪ್ತರಾಗದ ಮುಂಬಯಿಯ ಗೆಳತಿಯರು ಅವರ ರಾಜೀನಾಮೆಗೆ ಒತ್ತಾಯಿಸಿದ್ದಾರೆ. ಇನ್ನೂ ಬೇರೆ ಬೇರೆ ಪ್ರದೇಶಗಳಿಗೆ ಈ ಸುದ್ದಿ ತಲುಪಿಲ್ಲ. ಒಂದೇ ಪತ್ರಿಕೆ ಈ ಬಗ್ಗೆ ವಿವರ ಹೇಳುತ್ತಿದೆ. ಇತರ ಮಾಧ್ಯಮಗಳಿಗೆ ಇದು ಮುಖ್ಯ ಅನ್ನಿಸಿಲ್ಲ. ಅಥವಾ ಈ ದೇಶದ ಸರ್ವ ಶ್ರೇಷ್ಠ ನ್ಯಾಪೀಠದಲ್ಲಿ ಕುಳಿತಿರುವವರನ್ನು ಆಕ್ಷೇಪಿಸಿ. ದಕ್ಕಿಸಿಕೊಳ್ಳುವ ತಾಕತ್ತಿಲ್ಲ. ಯಾವ ಕಾರಣಕ್ಕೋ, ಯಾರ ರಕ್ಷಣೆಗೋ ನಮ್ಮಲ್ಲಿ ಕೆಲವು ನಿಯಮಗಳಿವೆ. ಈ ದೇಶದ ರಾಷ್ಟ್ರಪತಿಗಳನ್ನು ಕಂಡು ಆಕ್ಷೇಪಿಸುವಂತಿಲ್ಲ. ಅದು ಅಪರಾಧ. ಅಂಥ ಅಪರಾಧಕ್ಕೆ ಎಂಥ ಕಠಿಣ ಶಿಕ್ಷೆಯೂ ಸಾಧ್ಯ. ಅದೇ ಸರಿಸಮಾನ ಸ್ಥಾನ ರಾಷ್ಟ್ರದ ಸರ್ವೋಚ್ಚ ನ್ಯಾಯಮೂರ್ತಿಗಳದ್ದು. ಅವರನ್ನು ಟೀಕೆಗೆ ಒಳಗು ಮಾಡುವುದೂ ಅಪರಾಧ. ಈ ಸುದ್ದಿ ಪ್ರಕಟಿಸಿ, ಪ್ರತಿಕ್ರಿಯೆಗಳೂ ಬಂದು ಗದ್ದಲವಾದರೆ ಸರ್ವೋಚ್ಚ ನ್ಯಾಯಾಲಯದ ಕುಲಾಧಿಪತಿಯನ್ನು ನಿಂದಿಸಿದ ಅಪರಾಧ, ಪತ್ರಿಕೆಗಳನ್ನೇ ಮುಚ್ಚುಗೋಲು ಹಾಕುವುದು ಎಂಬ ಭಯ.... ಪ್ರಾಯಶಃ ಇಂಥ ಕಾರಣಗಳಿಗಾಗಿಯೇ ಎಲ್ಲರೂ ಕಿವುಡರಾದಂತಿದೆ.

ಇಂಥ ಬದುಕಿಗಾಗಿ ಬಣ್ಣಗೆಡುವ ಅನಿವಾರ್ಯಗಳ ನಡುವೆ ನಾವು ಸ್ವಾತಂತ್ರ್ಯ–ವಾಕ್ ಸ್ವಾತಂತ್ರ್ಯ–ಅಭಿವ್ಯಕ್ತಿ ಸ್ವಾತಂತ್ರ್ಯದ ಮಾತಾಡುತ್ತೇವೆ. ಅವೆಲ್ಲ ಎಷ್ಟು ಅರ್ಥಹೀನ ಬರೀ ಶಬ್ದಗಳಾಗಿ ಉಳಿದಿವೆ ಎಂಬುದಕ್ಕೆ ಈ ಘಟನೆಯಲ್ಲಿ ಎದ್ದು ಕಾಣುವ ಬೇಲಿಯೇ ಹೊಲ ಮೇದಂಥ ಪ್ರಸಂಗ ಸಾಲದೆ!

ಏನೇ ಅಪರಾಧ, ಶಿಕ್ಷೆ ಆದರೂ ಸರಿಯೇ ಶ್ರೀ ಮಿಶ್ರಾ ಅಂಥವರ ಒಳಮನಸ್ಸಿನ ಕೊಳಕುತನ ಹೊರಬಿದ್ದಿದೆ. ವಿರೋಧಿಸಲೇಬೇಕು. ಇಂಥವರಿಂದ ನ್ಯಾಯ ಪಡೆಯಲು ನಿರಾಕರಿಸಬೇಕು ಮತ್ತು ಅಂಥ ಗುರುತರ ಜವಾಬ್ದಾರಿಯ ಸ್ಥಾನದಲ್ಲಿರಲು ತಕ್ಕವರಲ್ಲ ಇಳಿದು ಬಿಡಿ ಎನ್ನಬೇಕು. ಒಬ್ಬ ಮಿಶ್ರಾ ಅವರೇ ಅಲ್ಲ. ಅಂಥ ಸಹಸ್ರಾರು ಮನಸ್ಸುಗಳು ನಮ್ಮ ಸುತ್ತಲೂ ಇವೆ. ಅವು ಮುಸುಕಿನಡಿಯಲ್ಲಿ ಮರೆಯಾಗಿವೆ. ಇಂಥ ಅನಾರೋಗ್ಯಕರ ಮನಸ್ಸಿಗೆ ಔಷಧಿ ಯಾವುದು? ಯಾರು ಕೊಡಬೇಕು ಮದ್ದು?

ಇಂಥ ವಿಚಾರವನ್ನು ಕೈಗೆತ್ತಿಕೊಂಡು ಖಂಡಿತವಾದ ನಿಲುವುಗಳನ್ನು ಹೇಳದೇ "ಕಮರ್ಷಿಯಲ್ ಸಿನಿಮಾಗಳಲ್ಲಿ ಹೇಗೆ ಅತ್ಯಾಚಾರದ ದೃಶ್ಯಗಳಿರುತ್ತವೆ" ಎಂದು ದಿನವಿಡೀ ಚರ್ಚಿಸುವ ನಮ್ಮ ಗೆಳತಿಯರಿಗೆ ಮಿಶ್ರಾ ಅಂಥವರ ವಿಚಾರಗಳಿಂದ ಇದೇ ಸ್ತ್ರೀ ಸಮುದಾಯದ ಮನಸ್ಸುಗಳ ಮೇಲೆ ಆಗುವ ಸಾಮೂಹಿಕ ಅತ್ಯಾಚಾರದ ಅರಿವಿಲ್ಲವಾದರೆ ಹಾದಿಯ ಕಲ್ಲು–ಕಟಿಗಳನ್ನು ಸರಿಸಲು ಮರೆತು, ಚಂದ್ರಮನ ಡೊಂಕು ಸರಿಮಾಡ ಹೊರಟ ವ್ಯರ್ಥ ಪ್ರಯತ್ನ ಮಾಡುತ್ತಿರುತ್ತೇವೆ. ಸಿಸಿಫಸ್‌ನ ಹಾಗೆ ಸಮಸ್ಯೆಗಳ ಬಂಡೆ ಹೊರುತ್ತಲೇ ಇರುತ್ತೇವೆ.

---

# ಸ್ತ್ರೀಯರ ಅಭಿವೃದ್ಧಿಗೆ ಇಂದಿನ ಮಾಧ್ಯಮಗಳು ಪೂರಕವಾಗಿವೆಯೇ?




ಇಂದಿನ ಸ್ತ್ರೀಯರ ಜೀವನದ ಕಲ್ಪನೆಗಳೆಲ್ಲ ಮಾಧ್ಯಮಗಳ ಮೂಲಕವೇ ಹೆಚ್ಚಾಗಿ ನಿರೂಪಿಸಲ್ಪಡುತ್ತಿವೆ. ಸಾಂಪ್ರದಾಯಿಕ ಮೌಲ್ಯಗಳಿಗೆ ಹೊಸ ಉಡುಗೆ ತೊಡಿಸಿ ಹೊಸದಾಗಿ ಸ್ತ್ರೀಯನ್ನು ಚಿತ್ರಿಸ ಹೊರಡುವ ಮಾಧ್ಯಮಗಳು ಸ್ತ್ರೀಯ ಬದುಕನ್ನು ಮೂಲಭೂತವಾಗಿ ಬದಲಾಯಿಸುವಂತೆ ಪ್ರಭಾವಿಸುವಲ್ಲಿ ವಿಫಲವಾಗುತ್ತಿವೆ. ಎಳೆಯ ಬಾಲೆಯರಿಂದ ಹಿಡಿದು ಸ್ತ್ರೀಯ ಜೀವನ ರೂಪುಗೊಳ್ಳಬೇಕಾದ ನಿರ್ಣಾಯಕ ಘಟ್ಟದಲ್ಲಿ ಮಾಧ್ಯಮ ಬೀರುತ್ತಿರುವ ಪ್ರಭಾವ ಋಣಾತ್ಮಕವಾದುದಾಗಿದೆ. ಮುಂದಿನ ದಿನಗಳಲ್ಲಿ ಆರೋಗ್ಯಕರ ಆಲೋಚನೆಗೆ ಅಕ್ಷರಶಃ ಸಮಾನತೆ ಇರುವ ಸಮಾಜ ರಚನೆಗೆ ಮಾಧ್ಯಮಗಳು ಯಾವ ರೀತಿಯಲ್ಲಿ ಕಾರ್ಯನಿರ್ವಸಬೇಕೆಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಗೀತಾ ಜಿ. ಎಸ್.

ಕೆಲವು ಕಾಲದ ಹಿಂದೆ ಎಳೆ ಬಾಲಕನೊಬ್ಬ "ಸೂಪರ್ ಮ್ಯಾನ್" ಆಗಲು ಹೊರಟು ಬಹು ಅಂಸ್ತಿನ ಕಟ್ಟಡದಿಂದ ಕೆಳಗೆ ಹಾರಿದುದು ಈಗ ಹಳೆಯ ಸಂಗತಿ. ಅವನ ಜೀವ ಉಳಿದದ್ದು ಆಶ್ಚರ್ಯದ ವಿಷಯ, ಇಲ್ಲಿ ಗಮನಿಸಬೇಕಾದುದು ಆ ಎಳೆ ಬಾಲಕನ ಮನಸ್ಸಿನ ಮೇಲೆ ತನ್ನ ಪ್ರಭಾವ ಮೂಡಿಸಿದ ಆ ಧಾರವಾಹಿ ದೂರದರ್ಶನದಲ್ಲಿ ಪ್ರಸಾರವಾಗುತ್ತಿತ್ತು ಎಂಬುದನ್ನು. ಹೀಗೆಯೆ ಪತ್ತೆದಾರಿ ಕಥೆಗಳನ್ನು ಓದಿ ಸ್ವತಃ ಪತ್ತೆದಾರರಾಗಲು ಹೊರಟು ಪೇಚಿಗೆ ಸಿಲುಕಿ ಕೆಲ ಸಂದರ್ಭಗಳಲ್ಲಿ ಪ್ರಾಣಕ್ಕೆ ಸಂಚಕಾರ ತಂದುಕೊಂಡವರ ಬಗ್ಗೆಯೂ ಓದುಗರಿಗೆ ತಿಳಿದಿರಬಹುದು. ಸಿನಿಮಾಗಳ ಪ್ರಭಾವದಿಂದ ದರೋಡೆಮಾಡಲು, ಅಪಹರಣ ಮಾಡಿ ಬೆದರಿಸುವುದು........ ಇತ್ಯಾದಿಗಳನ್ನು ನಾವು ಇಂದಿಗೂ ವೃತ್ತ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಹುಡುಗಿಯರನ್ನು ಕೆಣಕುವ ಪಡ್ಡೆ ಹುಡುಗರ ಬಗ್ಗೆ ಹಿರಿಯರು, "ಈ ಹಾಳ್ ಸಿನಿಮಾ ನೋಡಿ ಹುಡುಗರು ಕೆಟ್ಟು ಹೋಗ್ತಾರೆ ನೋಡಿ. ಈಗೀಗ ಬರೋವು ಎಲ್ಲ ಹೀಗೇ ಇರುತ್ವೆ" ಎಂದು ಗೊಣಗುವುದನ್ನು ಕೇಳುತ್ತಿರುತ್ತೇವೆ. ಚಲನಚಿತ್ರ, ಸಾಹಿತ್ಯಗಳಲ್ಲಿ ಆಕ್ಷೇಪಕ್ಕೆ ಕಾರಣವಾಗುವಂಥ ಸನ್ನಿವೇಶ, ಸಂದರ್ಭಗಳನ್ನು ಪ್ರತಿಭಟಿಸುವ ವರದಿಗಳೂ ಹೊಸದಲ್ಲ. ಈ ಮಾಧ್ಯಮಗಳು ಇಂದಿನ ಸ್ಥಿತಿ – ಗತಿ ಮಾತ್ರವಲ್ಲ ನಮ್ಮ ಹಿಂದಿನವರು ಬದುಕಿದ್ದ ರೀತಿಯನ್ನೂ ತೋರಿಸಿಕೊಡುತ್ತವೆ. ರೇಡಿಯೋ, ದೂರದರ್ಶನ, ಚಲನಚಿತ್ರಗಳು ತೀರಾ ಹಳೆಯದಲ್ಲ, ಆದರೆ ಬರವಣಿಗೆ "ಪುರಾತನ" ಎಂದು ಹೇಳುವಷ್ಟು ಹಳೆಯದು. ಇದರೊಂದಿಗೇ ಸಂಸ್ಕೃತಿಯನ್ನು ಬಿಂಬಿಸುತ್ತವೆ ಎಂದು ಹೇಳಲಾಗುವ ಸಾಮಾಜಿಕ ಸಂಪ್ರದಾಯಗಳು, ಆಚರಣೆ, ಜಾನಪದ ಕಥೆ,-ಗೀತೆ, ಗಾದೆಗಳು, ಸುಭಾಷಿತಗಳೂ ಸೇರುತ್ತವೆ. ಯಾವುದೇ ಒಂದು ನಾಗರೀಕ ಸಮಾಜದ ಮಟ್ಟವನ್ನು, ಬೆಳವಣಿಗೆಯನ್ನು ಆ ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾ

ನಗಳಿಂದ ಅಳೆಯಲಾಗುತ್ತದೆ.

ಪ್ರಾಚೀನ ಭಾರತದ ಮಹಿಳೆ ಅತ್ಯುನ್ನತ ಸ್ಥಾನ ಪಡೆದಿದ್ದಳು ಎಂದು ಹೇಳಲಾಗುತ್ತದೆ. ಶೈಕ್ಷಣಿಕ, ಔದ್ಯೋಗಿಕ ಕ್ಷೇತ್ರದಲ್ಲಿ ಸಮಾನತೆ, ಸ್ವಾತಂತ್ರ್ಯ ಹೊಂದಿದ್ದರು, ಆದರ, ಗೌರವಗಳಿಂದ ಸ್ತ್ರೀಯರನ್ನು ಕಾಣಲಾಗುತ್ತಿತ್ತು ಎಂದು ಗ್ರಂಥಗಳು ಹೇಳುತ್ತವೆ. ರಾಜಕುವರಿಯರು, ಗಣ್ಯರ ಮನೆಯ ಹೆಣ್ಣುಮಕ್ಕಳು ಶಾಸ್ತ್ರಾಧ್ಯಯನಗಳಿಂದ ತಮ್ಮ ಪಾಂಡಿತ್ಯವನ್ನು ವಿಕಾಸಗೊಳಿಸಿಕೊಳ್ಳುತ್ತಿದ್ದರು ಎಂದು ವಾತ್ಸಾಯನ ತನ್ನ "ಕಾಮಸೂತ್ರ" ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಸ್ತ್ರೀಯರು ತಿಳಿದುಕೊಳ್ಳಲೇಬೇಕಾದ ೬೪ ವಿದ್ಯೆಗಳನ್ನೂ ಹೆಸರಿಸಿದ್ದಾನೆ. ಚಾರಿತ್ರಿಕ ಪರಂಪರೆಯ ಅಧ್ಯಯನವನ್ನೂ ಸ್ತ್ರೀಯರು ರಚಿಸುತ್ತಿದ್ದರು; ಸ್ತ್ರೀಯರೇ ಸ್ವತಃ ರಚಿಸಿದ ಶ್ಲೋಕಗಳನ್ನು ಇಂದಿಗೂ ಕಾಣಬಹುದು. ನಂತರದ ದಶಕಗಳಲ್ಲಿ ಬದಲಾದ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸ್ತ್ರೀಯರಿಗಿದ್ದ ಸ್ಥಾನ ಕಾಣೆಯಾಗುವುದರೊಂದಿಗ ಕುಟುಂಬದಲ್ಲಿಯೂ ಅವಳು ತೀರ ಕೀಳುತರದಿಂದ ಜೀವಿಸುವಂತಾಯಿತು.

ಸ್ವಾತಂತ್ರ್ಯಾನಂತರ ನಮ್ಮ ದೇಶದಲ್ಲಿ ಸಂವಿಧಾನ ಸ್ತ್ರೀ ಪುರುಷರಿಬ್ಬರಿಗೂ ಸಮಾನತೆ, ಸ್ವಾತಂತ್ರ್ಯವನ್ನು ಹೇಳಿದೆ. ಆದರೆ ಇಂದಿನ ಮಹಿಳೆ ಎದುರಿಸುತ್ತಿರುವ ಸಂಘರ್ಷ, ಅನಿಶ್ಚಯತೆಗಳು ವೇದಕಾಲೀನ ಸ್ತ್ರೀಯರಿಗಿರಲಿಲ್ಲ. ಗ್ರಾಮೀಣ ಮಹಿಳೆಯರಿಗೆ ಅನಕ್ಷರತೆಯ ಶಾಪವಿದ್ದರೆ, ವಿದ್ಯಾವಂತ ಮಹಿಳೆ ಸಂಪ್ರದಾಯದ ಸಂಕೋಲೆ, ಯಾಂತ್ರಿಕ ಜೀವನಗಳಲ್ಲಿ ತೊಳಲಾಡುತ್ತಿದ್ದಾಳೆ. ಸಾಮಾಜಿಕ ದಿಗ್ಬಂಧನಗಳು ಅವಳ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿವೆ. ಪರಿಸ್ಥಿತಿಯ ಒತ್ತಡದಿಂದ ಅವಳು ಮನೆಯಿಂದ ಹೊರಗೆ ಕೆಲಸ ಮಾಡಬೇಕಾದಂಥ ಸಂದರ್ಭಗಳಲ್ಲಿ ಅವಳು ಸಂಘರ್ಷಗಳ ತಪ್ಪಿಸಿಕೊಳ್ಳುವುದೇ ಅಸಾಧ್ಯ. ಇವೆಲ್ಲವನ್ನೂ ಪರಿಹರಿಸಿಕೊಳ್ಳಬೇಕಾದರೆ ಅನಗತ್ಯ ಆಚರಣೆಗಳನ್ನು ಉಸಿರುಗಟ್ಟಿಸುವಂಥ ರೀತಿನೀತಿಗಳನ್ನು ದೂರಮಾಡುವಲ್ಲಿ ಸ್ತ್ರೀ ಪುರುಷರೆನ್ನದೆ ಪ್ರತಿಯೊಬ್ಬರೂ ಕೈಜೋಡಿಸಬೇಕು. ಸ್ತ್ರೀಯರಿಗಿರುವ ಹಕ್ಕು, ಅವರು ಸಮಾಜಕ್ಕೆ, ರಾಷ್ಟ್ರಕ್ಕೆ ಸಲ್ಲಿಸಬೇಕಾದ ಸೇವೆ, ಅವರಲ್ಲಿ ಮೂಡಬೇಕಾದ ರಾಷ್ಟ್ರೀಯ ಪ್ರಜ್ಞೆಗಳ ಅರಿವು ಆದಷ್ಟು ಅವರಿಗೆ ಬರುವಂತೆ ಮಾಡಬೇಕು. ಈ ಕೆಲಸವನ್ನು ಸಮೂಹ ಮಾಧ್ಯಮಗಳು ಮಾಡಬಲ್ಲವು. ಏಕೆಂದರೆ ವರ್ಗ–ಅಂತಸ್ತು, ಮೇಲು-ಕೀಳು, ನಗರ – ಹಳ್ಳಿ, ಸ್ತ್ರೀ-ಪುರುಷರು, ಅಕ್ಷರಸ್ಥ–ಅನಕ್ಷರಸ್ಥರೆಂಬ ಭೇದವಿಲ್ಲದೆ ಎಲ್ಲರಿಗೂ ಸಂದೇಶ ನೀಡುವುದರೊಂದಿಗೆ ಒಳಿತು-ಕೆಡಕುಗಳನ್ನು ವಿಮರ್ಶಿಸುವ ಕೆಲಸ ಮಾಡಬಲ್ಲವು. ಜೊತೆಗೆ ಅನಕ್ಷರತೆಯನ್ನು ಹೋಗಲಾಡಿಸುವ ದಿಕ್ಕಿನಲ್ಲೂ ಇವು ಸಫಲವಾಗಿ ಕೆಲಸ ಮಾಡುವಂತೆ ಕ್ರಮಬದ್ಧ ಯೋಜನೆಗಳನ್ನು ರೂಪಿಸಬೇಕು.

**ಈಗಿನ ದಿನಗಳಲ್ಲಿ ಮಾಧ್ಯಮಗಳು ಕಾರ್ಯನಿರ್ವಹಿಸುತ್ತಿರುವ ರೀತಿ:**

ಸಮೂಹ ಮಾಧ್ಯಮಗಳು ಹಳೆಯ ವ್ಯವಸ್ಥೆಗೇ ತೆಕ್ಕೆಹಾಕಿಕೊಂಡು ಸ್ತ್ರೀ–ಪುರುಷರ ಚಿತ್ರಣದಲ್ಲಿ ಸ್ಪಷ್ಟವಾದ ಭೇದಭಾವ ತೋರುತ್ತದೆ. ಕಾರಣ ಈ ಎಲ್ಲವುಗಳನ್ನೂ ಹಿಡಿತದಲ್ಲಿಟ್ಟುಕೊಂಡಿರುವವರ ಪ್ರಭಾವ ಈ ಮಾಧ್ಯಮಗಳ ಮೇಲಿದೆ. ಈ ಹಿಂದೆಯೂ ಈ ವ್ಯವಸ್ಥೆ ಇತ್ತು. ಈ ವೈಜ್ಞಾನಿಕ ಯುಗದಲ್ಲೂ ತೀರ ಒಂದು ಶತಮಾನದಿಂದೀಚೆಗಷ್ಟೇ ಹೆಣ್ಣು ತನ್ನ ಸ್ಥಾನದ ಬಗ್ಗೆ ತನ್ನ ಮೇಲೆ ಹೇರಲ್ಪಟ್ಟಿರುವ ಹುಸಿತೋರಣೆಗಳ ಬಗ್ಗೆ ಚಿಂತಿಸಿ, ಪ್ರಶ್ನಿಸುವ, ಪ್ರತಿಭಟಿಸುವ ಧೈರ್ಯ ತೋರಿದ್ದು. ನಮ್ಮ ನಮ್ಮ ಭಾವನೆಗನ್ನು, ನೋವನ್ನು, ಹೆಣ್ತನವನ್ನು, ಒಳ್ಳೆಯದು, ಕೆಟ್ಟದ್ದು, ನೈತಿಕತೆ–ಅನೈತಿಕತೆ. ಧರ್ಮ, ಮನಶ್ಶಾಸ್ತ್ರ, ವಿಜ್ಞಾನಗಳ ಬಗ್ಗೆ ಮಾತಾಡಬಲ್ಲೆವೆಂಬ ಧೈರ್ಯ ತಾಳಿ ಹಳೆ ಮೌಲ್ಯಗಳಿಗೆ ಸಡ್ಡು ಹೊಡೆದು ನಿಂತಿದ್ದಾರೆ ಇಂದಿನ ವಿಶ್ವದ ಸ್ತ್ರೀಯರು. ಈ ಪುರುಷ ಪ್ರಾಧಾನ್ಯತೆ ಅಭಿವೃದ್ಧಿ ಪರ ರಾಷ್ಟ್ರಗಳಾದ ಭಾರತದಂತಹ ದೇಶದಲ್ಲಿ ಮಾತ್ರವಲ್ಲ, ಅಭಿವೃದ್ಧಿ ಹೊಂದಿರುವ ದೇಶಗಳನ್ನೂ ಬಿಟ್ಟಿಲ್ಲ. ಇಂದಿಗೂ ಜಗತ್ತಿನಲ್ಲಿ ಮುಂಚೂಣಿಯಲ್ಲಿರುವ ದೇಶಗಳಲ್ಲೊಂದು ಎಂದು ಕರೆಯಲ್ಪಡುವ ಅಮೇರಿಕೆಯಲ್ಲಿ ಸ್ತ್ರೀಯರಿಗೆ ಉನ್ನತ ಅಧಿಕಾರದ ಸ್ಥಾನವನ್ನು ನೀಡಲು ಹಿಂದೇಟು ಹಾಕುತ್ತಾರೆ.

ಸ್ತ್ರೀಯರನ್ನು ಸಾಕುಪ್ರಾಣಿಗಳಂತೆ ನಡೆಸಿಕೊಳ್ಳುತ್ತಾ. ಅವರಿಂದ ವಿಧೇಯತೆಯನ್ನು ಬಯಸುತ್ತಾ

ಲೈಂಗಿಕ ದೌರ್ಜನ್ಯಕ್ಕೆ, ಹಿಂಸೆ, ಶೋಷಣೆಗಳಿಗೆ ಸುಲಭವಾಗಿ ಪಕ್ಕಾಗುವ ಎರಡನೇ ದರ್ಜೆಯವರೆಂದು ಚಿತ್ರಿಸುತ್ತವೆ ಮಾಧ್ಯಮಗಳು. "ಸುಂದರ ವಸ್ತು" ವೆಂಬಂತೆ ವರ್ಣಿಸಲ್ಪಡುವ ಸ್ತ್ರೀಯರು ಜೀವನದಲ್ಲಿ ಬಹಳವಾಗಿ ಅವಶ್ಯಕತೆ ಇರುವಂಥವರೆಂದಷ್ಟೇ ಚಿತ್ರಿಸುತ್ತವೆಯಲ್ಲದೆ ಅವರ ಭಾವನೆಗಳಿಗೆ, ವ್ಯಕ್ತಿತ್ವಕ್ಕೆ ಮೆರಗು ನೀಡಲೆತ್ನಿಸುವುದಿಲ್ಲ. ಎಂಥದೇ ಕಥೆ, ಎಷ್ಟೇ ಹೊಸತನ........ಎಂಬೆಲ್ಲ ಶೀರ್ಷಿಕೆಯಡಿಯಲ್ಲಿ ಬಂದರೂ "ಕೊಂಕಣ ಸುತ್ತಿ ಮೈಲಾರಕ್ಕೆ" ಬಂದಂತೆ ಹಳೇ ಮೌಲ್ಯವನ್ನೇ ಎತ್ತಿ ಹಿಡಿಯುವ ಹುರುಪು ಮಾಧ್ಯಮಗಳಿಗೆ ಕೆಲವೊಂದು ವರ್ಗಗಳಲ್ಲಿ "ಸಮಾನತೆ" ಇದೆಯೆಂದು ಕಂಡುಬಂದರೂ ಸಾರಾಸಗಟಾಗಿ ಸ್ತ್ರೀ ಸಮೂಹಕ್ಕೆ "ಸಮಾನತೆ" ಎಂಬುದು ದೂರದ ಮರೀಚಿಕೆಯಾಗಿದೆ. ಇಂದಿಗೂ ಮಾದರಿ ಮಹಿಳೆ ಎಂದು ಚಿತ್ರಿಸುವುದು — "ಗೃಹಿಣಿ", "ತಾಯಿ" ಯರನ್ನೇ. ಎಷ್ಟೇ ವಿದ್ಯಾವಂತರಿರಲಿ, ಪ್ರಗತಿಶೀಲರೆಂದು ಬಡಾಯಿಕೊಚ್ಚಿಕೊಳ್ಳುತ್ತಿರಲಿ, ವಿಚಾರವಂತರೆಂದು ಎದೆ ತಟ್ಟಿಕೊಂಡು ಹೇಳಿರಲಿ, — ಆದರೆ ಇಂಥ ವ್ಯಕ್ತಿಗಳ ಹಿಡಿತದಲ್ಲಿರುವ ಸಮೂಹ ಮಾಧ್ಯಮಗಳು ಮಹಿಳೆಗೆ ಬೇರೆ ರೀತಿಯ ವ್ಯಕ್ತಿತ್ವವನ್ನು ಕೊಡಲು ಇಚ್ಛಿಸವು. ಹಿಂದಿನವರ ಧೋರಣೆಗಳಲ್ಲಿ ಇಲ್ಲಿಯವರೆಗೂ ಹಲವಾರು ಬದಲಾವಣೆಗಳಾಗಿವೆ, ಆಗುತ್ತಿವೆ. ಆದರೆ ಮಹಿಳೆಯ ಸ್ಥಾನ — ಮಾನದ ಬಗ್ಗೆ ಮಾತ್ರ ವಾರು ಚಿಂತನೆಗೆ ಹೆಚ್ಚು ಮಂದಿಯಿಂದ ಸಹಕಾರ ನಿರೀಕ್ಷಿಸುವುದು ಅಸಾಧ್ಯ — ಅದೇ ಮಾಧ್ಯಮಗಳು ಕಾರ್ಯನೀತಿಯನ್ನು ಬದಲಿಸದಿರಲು ಕಾರಣ. ಹಳ್ಳಿಗಳಲ್ಲಿನ ಹೆಂಗಸರು, ಪಟ್ಟಣಗಳಲ್ಲಿನ ಸ್ತ್ರೀಯರಿಗಿಂತ ಇನ್ನೂ ಹೆಚ್ಚಿನ ಪ್ರತಿಕೂಲ ಪರಿಸ್ಥಿತಿಯನ್ನೆದುರಿಸುತ್ತಿದ್ದಾರೆ, ಕಾರಣ ಅವರ ಅನಕ್ಷರತೆ, ಬೌದ್ಧಿಕ ಬೇರ್ಪಡೆ, ತೀರಾ ಪರಿಮಿತ ಸಂಬಂಧಗಳು. ಆಚಾರ, ಸಂಪ್ರದಾಯಗಳ ಸಂಕೋಲೆ, ಹಳ್ಳಿಯ ಹಿರಿಯರ ಹಳೇ ಮೂಢನಂಬಿಕೆಗಳು, ಆಚರಣೆಗಳೊಂದಿಗೆ ಬಾಲ್ಯದಿಂದಲೂ ಬೆಳೆದ ರೀತಿ ಇವಾವುದನ್ನೂ ಸುಲಭವಾಗಿ ತ್ಯಜಿಸಲು ಬಯಸುವುದಿಲ್ಲ. ಇದರೊಂದಿಗೆ ಇವನ್ನೇ ಬಿಂಬಿಸುವಂಥ ಕಾರ್ಯಕ್ರಮಗಳನ್ನು ಅವರೆದುರಿಗಿಟ್ಟರೆ ಆ ಮುಗ್ಧರು ಬದಲಾಗುವುದಾದರೂ ಹೇಗೆ?

ದುಡಿಯುವ ವರ್ಗಕ್ಕೆ ಸೇರಿದ ಬಾಲಿಕೆಯರು, ಸ್ತ್ರೀಯರು ಯಾವಕಾರಣಕ್ಕಾಗಿ ದುಡಿಮೆಯ ನೊಗಕ್ಕೆ ಸಿಲುಕಿದ್ದಾರೆಂಬುದನ್ನು ಉಲ್ಲೇಖಿಸುವುದಿಲ್ಲ ಮಾಧ್ಯಮಗಳು ಹಾಗೇ ಇವರು ನಿರ್ವಹಿಸುವ ಕರ್ತವ್ಯಕ್ಕೂ ನ್ಯಾಯ ಸಲ್ಲಿಸುವುದಿಲ್ಲ. ವಿಶ್ವದ ಶೇ೫೦ರಷ್ಟು ಆಹಾರವನ್ನು ತಯಾರಿಸುವವರು ಈ ಬಡಪಾಯಿಗಳು ಸಂಸಾರದ ಅಗತ್ಯಗಳಾದ ಉರುವಲು, ನೀರು, ಆಹಾರವನ್ನೂ ಸಹ ಪೂರೈಸಬೇಕು, ಗ್ರಾಮೀಣ ಹೆಣ್ಣುಮಕ್ಕಳು ಶಾಲೆಯಿಂದ ದೂರ, ಸಣ್ಣವರಿದ್ದಾಗಲೇ ವಿವಾಹ ವಿಧಿಗೊಳಪಡುತ್ತಾರೆ. ಅಕ್ಷರತೆ ತೀರ ಕಡಿಮೆ ಎಂದೆಲ್ಲ ಹೇಳುವ ಮಾಧ್ಯಮಗಳು ಆ ಎಳೆ ಮಕ್ಕಳು ತಮ್ಮ ಕುಟುಂಬಕ್ಕಾಗಿ, ಸಮಾಜಕ್ಕಾಗಿ, ದೇಶಕ್ಕಾಗಿ ಹರಿಸುವ ಬೆವರಿಗೆ ಬೆಲೆ ದೊರಕಿಸಲೆತ್ನಿಸುವುದಿಲ್ಲ. ಅವರ ದುಡಿಮೆ, ವಯಸ್ಕರ ದುಡಿಮೆಗಿಂತ ಕಡಿಮೆಯೇನಿರುವುದಿಲ್ಲ. ತೀರ ಅಲ್ಪ ಸ್ವಲ್ಪ ಸಂಖ್ಯೆಯಲ್ಲಿ ಸ್ತ್ರೀಯರ ಅಭಿವೃದ್ಧಿಗೆ ಪೂರಕವಾಗುವಂಥ ಕಾರ್ಯಕ್ರಮಗಳು, ಸಾಹಿತ್ಯಗಳು ಬಂದಿವೆ.

ಹೆಣ್ಣುಮಕ್ಕಳಿಗೆ ಗಮನಕೊಡಬೇಕಿಲ್ಲ ಏಕೆಂದರೆ ಅವರು ಪರರ ಮನೆಯ ತೋಟದಲ್ಲಿನ ಗಿಡ ಎಂಬ ಭಾವನೆ ಹಲವಾರು ಮಂದಿಯಲ್ಲಿದೆ. ಈಗಲೂ ನಾವು ನಮ್ಮ ಸುತ್ತಮುತ್ತ ಕಾಣವುದು:—

೧) ಹೆಣ್ಣೆಂದರೆ ಅಗೌರವಕ್ಕೊಳಗಾಗುತ್ತಿರುವ ಜೀವಿ.

೨) ಮಗ ಹುಟ್ಟದರೆ ಹಿರಿಹಿರಿ ಹಿಗ್ಗುವ ಹೆತ್ತವರು ಮಗಳು ಜನ್ಮಿಸಿದರೆ ಆ ತಾಯಿ ಎಲ್ಲರ ಅನುಕಂಪ, ತಾತ್ಸಾರಗಳನ್ನು ಎದುರಿಸುತ್ತಾಳೆ,

೩) ಸ್ವತಃ ತಾಯಿ ತನ್ನ ಮಗಳಿಗೆ ಕೊಡುವ ವಸ್ತುಗಳಲ್ಲಿ ಬಹಳಷ್ಟು ಮೊಟಕು ಮಾಡುತ್ತಾಳೆ. ಮಗಳು ತನ್ನ ಅಗತ್ಯಗಳನ್ನು ಪಡೆಯಲು ಬೇಡಿಕೊಳ್ಳುವಂಥ ದಿನಗಳಿವು.

೪) ಮನೆಯ ನಾಲ್ಕು ಗೋಡೆ, ಅಂಗಳಗಳ ನಡುವೆ ತನ್ನ ಬಾಲ್ಯವನ್ನು ಕಳೆದುಕೊಂಡ ಅದೃಷ್ಟಹೀನೆ. ಬಾಲ್ಯದ ತುಂಟತನ, ಸರತೆಗಳನ್ನು ಕಂಡರಿಯಳು, ಸಂತೋಷ, ಹಾಸ್ಯಕ್ಕೂ ಅವಳು ಅರ್ಹಳಲ್ಲ ಹಾಗೂ ಅವಳ ಸ್ವಾತಂತ್ರ್ಯದ ರೆಕ್ಕೆಗಳನ್ನು ಮುರಿದು ಹಾಕಲಾಗಿದೆ.

ಅರ್ಧಹೊಟ್ಟೆಯ ಊಟ, ಅರೆಬರೆವಿದ್ಯೆಗೆ ತೃಪ್ತಿಪಡಲೇಬೇಕಾದ ಬಾಲೆಗೆ ಬಂಧನಗಳು ಒಂದೆರಡಲ್ಲ. ಬೆಳಕು, ನೀರನ್ನು ಕಾಣದ ಎಳೆ ಮೊಗ್ಗುಗಳಂತೆ ಅಲ್ಲೇ ಅವು ಅರಳದೆ ಮುರುಟಿ ಹೋಗುತ್ತವೆ. ಇಂದಿಗೂ "ಮಕ್ಕಳು" ಎಂದರೆ "ಗಂಡು ಮಕ್ಕಳು" ಮಾತ್ರ ಎಂದು ಭಾವಿಸುವವರ ಸಂಖ್ಯೆ ಏನೂ ಕಡಿಮೆ ಇಲ್ಲ. ಕಿರಿಯರಿಗೆ ಹರಸುವಾಗ, ಗಂಡುಮಗುವಿನ ತಾಯಾಗು ಎಂದೇ ಹರಸುತ್ತಾರೆ. ಗಂಡನ ಒಳಿತಿಗಾಗಿ ವ್ರತ ನೇಮಗಳನ್ನು ಮಾಡುವವರು, ಗಂಡುಮಗು ಪಡೆಯುವ ಹಂಬಲದಿಂದ ಕಠೋರ ನಿಯಮಗಳನ್ನು ಪರಿಪಾಲಿಸುವವರು ಇದ್ದಾರೆ.

ಚಲನಚಿತ್ರಗಳು ಜನರ ಮನದ ಮೇಲೆ ಮಾಡುವ ಪ್ರಭಾವ ಅಷ್ಟಿಷ್ಟಲ್ಲ. ಜನರನ್ನು ಒಲೈಸಲು ನಾಮುಂದು ತಾಮುಂದು ಎಂದು ನುಗ್ಗುವ ನಿರ್ಮಾಪಕರು, ನಿರ್ದೇಶಕರು ತಮ್ಮ ಚಿತ್ರದ ಯಶಸ್ಸಿಗಾಗಿ ಎಂಥ ಕೆಟ್ಟ ಪರಿಣಾಮವನ್ನು ಬೀರಿದರೂ ಸೈ ಯಾವ ಸಂಗತಿಯನ್ನೂ ಬಿಡರು. ಸೆಕ್ಸ್, ಹಿಂಸೆ, ನರಬಲಿ.... ಇತ್ಯಾದಿ. ಇತ್ತೀಚೆಗೆ ಬಂದ ಕನ್ನಡ ಚಿತ್ರಗಳಲ್ಲಿ ಕೆಲವು ಒಂದೇ ಬಗೆಯ ಗುರಿಯನ್ನು ಹೊಂದಿದ್ದವು. ಅವುಗಳ "ನಾಯಕಿ" ಯರು ಗಂಡುಬೀರಿಯರು, ಆ ನಾಯಕರು ಅವರನ್ನು ಪಳಗಿಸಿ ಒಳ್ಳೆಯವರನ್ನಾಗಿ ಮಾಡುವ ಸಾಹಸ. ಈ ಚಿತ್ರಗಳು ಯಾರ ಮೇಲೂ ಪರಿಣಾಮ ಬೀರವು ಎಂದು ನಿರೀಕ್ಷಿಸಿದರೆ ತುಂಬ ತಪ್ಪು. ಬಾಲಕಿಯರಲ್ಲಿ ಕೆಲವರಿಗೆ ಆ ಚಿತ್ರಗಳ ನಾಯಕಿಯರು ಆದರ್ಶವಾದರೆ, ಕೆಲ ಪುಂಡು ಹುಡುಗರು ವಯಸ್ಸಿನ ಭೇದವಿಲ್ಲದೆ ಎಲ್ಲ ಸ್ತ್ರೀಯರನ್ನೂ ಆ ನಾಯಕಿಯರ ರೂಪದಲ್ಲಿ ಕಂಡು ತಾವು ಅವರನ್ನು ಪಳಗಿಸ ಹೊರಟ ಧೀರರೆಂದು ಭಾವಿಸಿದ ಉದಾಹರಣೆಗಳನ್ನು ಕಂಡಿದ್ದೇವೆ.

ಇಂದು ಚಿತ್ರರಂಗ ಸ್ತ್ರೀಯರಿಗೆ ನ್ಯಾಯ ಒದಗಿಸುತ್ತಿಲ್ಲವೆಂಬದು ಹುಸಿಮಾತಲ್ಲ. ೧೯೮೧ರಲ್ಲಿ ಬಾಂಬೆಯಲ್ಲಿ ನಡೆದ "ನ್ಯಾಷನಲ್ ವಿಮೆನ್ಸ್ ಸ್ಟಡೀಸ್" ಕಾನ್ಫರೆನ್ಸ್‌ನಲ್ಲಿ ಫೆಮಿನಿಸ್ಟ್ ಮೀಡಿಯಾ ಗ್ರೂಪ್ ಮಾಧ್ಯಮಗಳು ಮಧ್ಯಮ ವರ್ಗದ ಸ್ತ್ರೀಯರನ್ನು ತೆರೆಯಮೇಲೆ ತೋರಿಸುವ ರೀತಿಯನ್ನು ಖಂಡಿಸಿ, ರಾಷ್ಟ್ರ ಮಟ್ಟದಲ್ಲಿ ಸ್ತ್ರೀಯರಿಗೆ ನ್ಯಾಯ ಒದಗಿಸುವ ರೀತಿಯಲ್ಲಿ ಸುದ್ದಿ ಮಾಧ್ಯಮಗಳಿಗೆ, ಚಿತ್ರಗಳನ್ನು ತೆಗೆಯುವವರಿಗೆ ತರಬೇತಿ ಅಗತ್ಯವಿದೆ ಎಂದು ಹೇಳಿಕೆನೀಡಿತ್ತು.

೧೯೮೪ರಲ್ಲಿ ದಾಸ್‌ಗುಪ್ತ ಮತ್ತು ಹೆಗ್ಡೆಯವರು ಚಿತ್ರಗಳಲ್ಲಿ (ಹಿಂದಿ) ಮಹಿಳೆಯರ ಚಿತ್ರಣವನ್ನು ಕುರಿತು ಹೊರಗೆಡವಿದ ಅಂಶಗಳು ಇಲ್ಲಿವೆ.

೧) ಪುರುಷಪ್ರಧಾನ ಮೌಲ್ಯಗಳಿಗೆ ಒತ್ತು ನೀಡುವುದರೊಂದಿಗೆ, ಹೆಣ್ಣಿಗೆ ಪಾತಿವ್ರತ್ಯ, ಪರಾವಲಂಬಿತನ, ಸಹನಶಕ್ತಿಗಳೇ ಅವಳ ವಿಶೇಷತೆಯೆಂದು ಚಿತ್ರಿಸುವುದರೊಂದಿಗೆ ಸಮಾಜದಲ್ಲಿ ಅವಳಿಗೆ ೨ನೆಯ ದರ್ಜೆಯನ್ನು ನೀಡಲಾಗುತ್ತಿದೆ. ಪುರುಷನ ಪ್ರತಿಷ್ಠೆಗೆ ಹೆಚ್ಚು ಒತ್ತುಕೊಡಲಾಗುತ್ತದೆ.

೨) ಮಹಿಳೆಯರನ್ನು ಆದರಿಸದಿರುವುದು ನ್ಯಾಯವೆಂಬಂತೆ ತೋರಿಸಲಾಗುತ್ತದೆ.

೩) ಚಿತ್ರಗಳಲ್ಲಿ ಸ್ತ್ರೀ–ಪುರುಷ ಪಾತ್ರಗಳೆರಡೂ ಅತ್ಯಂತ ನೋವು, ಕಷ್ಟ, ಅನ್ಯಾಯಗಳನ್ನು ಅನುಭವಿಸುವಂತೆ ಚಿತ್ರಿಸಲ್ಪಟ್ಟರೂ ಆ ಪರಿಸ್ಥಿತಿಗಳನ್ನು ಆ ಪಾತ್ರಗಳು ಎದುರಿಸುವ ರೀತಿ ಮೊದಲಿನಿಂದಲೂ ಇಂದಿನವರೆಗೂ ಯಾವುದೇ ವ್ಯತ್ಯಾಸವಿಲ್ಲದೆ ಏಕತಾನದಂತಿರುತ್ತದೆ. ಹೇಗೆಂದರೆ ಸ್ತ್ರೀಯರು ಅಂಥ ಸಂದರ್ಭಗಳಲ್ಲಿ ಅಸಹಾಯಕ ಜೀವಿಗಳಂತೆ ಕಣ್ಣೀರು ಹಾಕುತ್ತಾ ಕುಳಿತರೆ, ಪುರುಷರು ಆ ವ್ಯವಸ್ಥೆಯ ವಿರುದ್ಧ ಸಡ್ಡುಹೊಡೆದು ಆಕ್ರಮಣ ಮಾಡಲೆಳಸುತ್ತಾರೆ.

೪) ಸಿನಿಮಾಗಳು ಸ್ತ್ರೀಯರ ಸ್ವ–ಗೌರವ, ಆತ್ಮವಿಶ್ವಾಸ, ಪ್ರಗತಿಯನ್ನು ಕುಂದಿಸುವುದರಲ್ಲಿ ಯಶಸ್ವಿಯಾಗಿವೆ.

ಈ ಅಂಶಗಳು ಕೇವಲ ಹಿಂದಿ ಚಲನಚಿತ್ರಗಳದೆಂದು ಹೇಳುವಂತಿಲ್ಲ, ಪ್ರಾದೇಶಿಕ ಭಾಷೆಗಳ ಚಿತ್ರಗಳ ಕಥೆಯೂ ಇದೇ ರೀತಿ, ಚರ್ವಿತ ಚರ್ವಣ.

ದೂರದರ್ಶನಗಳು ಮತ್ತು ರೇಡಿಯೋ:

ನಾಟಕ, ಚಿತ್ರಗಳು, ದೂ.ದ.ಗಳು ರೇಡಿಯೋಗಳಲ್ಲಿ ಸ್ತ್ರೀ–ಪುರುಷ ಚಿತ್ರಣ ನೈಜತೆಗೆ ದೂರವಾಗಿ

ರುತ್ತವೆ. ವಿಜೃಂಭಿಸುತ್ತಿವೆ. ಮೇಲೆಯುಗಟ್ಟಲೆ ಜನರ ಕಣ್ಮನ ಸೆಳೆಯುವ ಇವು ನಿಜಜೀವನದ ಘಟನೆಗಳನ್ನಾಧರಿಸಿದ ನಾಟಕೀಯ ರೂಪದ ಭಾಗಗಳು. ಸ್ತ್ರೀ ಪಾತ್ರದ ಸುತ್ತ ಹೆಣೆದ ಘಟನೆಗಳಿಂದ ತುಂಬಿಹೋಗಿರುವ ಇವು ಸಂಕಷ್ಟಗಳನ್ನು ಎದುರಿಸಬೇಕಾದವುಗಳೆಡೆಗೆ ಗಮನ ಹರಿಸದೆ, ಮಹಿಳೆಯೆಂದರೆ — ತಾಯಿ, ಗೃಹಿಣಿ ಅಥವಾ ಲೈಂಗಿಕ ವಸ್ತುವೆಂಬಂತೆ ರೂಪಿಸುತ್ತವೆ. ಸ್ತ್ರೀಯರು ಪರಾವಲಂಬಿಗಳು, ಮೂರ್ಖರು, ಅನಿಶ್ಚಿತ ಬುದ್ಧಿಯುಳ್ಳವರು, ತಕ್ಕರು, ಸ್ಪರ್ಧಾತ್ಮಕ ಮನೋಭಾವವಿಲ್ಲದವರು ಎಂಬಂತೆ ಚಿತ್ರಿಸಲ್ಪಡುತ್ತಾರೆ. ಚಲನಚಿತ್ರ, ಆಕಾಶವಾಣಿಗಳಲ್ಲಿ ಶೇ. ೩೦ಕ್ಕಿಂತ ಹೆಚ್ಚು ಸ್ತ್ರೀಯರು ಉದ್ಯೋಗಿಗಳಾಗಿಲ್ಲ. ಯು.ಎಸ್.ಎ.ದಲ್ಲಿ ೧೯೭೧ರ ಸಮೀಕ್ಷೆಯಂತೆ ಶೇ. ೩೦, ಇಟಲಿಯ ಆರ್‌ಎಐಯಲ್ಲಿ ಶೇ. ೨೦(೧೯೭೫ರಲ್ಲಿ), ಕೆನಡಾದ ಸಿಬಿಸಿಯಲ್ಲಿ ಶೇ.೨೫ (೧೯೭೫), ಎಫ್‌ಆರ್ ಜಿಯಲ್ಲಿ ಶೇ. ೨೫ ಉದ್ಯೋಗಿಗಳಾಗಿದ್ದಾರೆ. ಒಟ್ಟಿನಲ್ಲಿ ಪ್ರಪಂಚದ ಯಾವುದೇ ಮೂಲೆಗ ಹೋದರೂ ಇದೇ ಕಥೆ. ಭಾರತದ ದೂರದರ್ಶನಗಳಲ್ಲಿ ಕಾಣಿಸುವ ಸ್ತ್ರೀ ಪಾತ್ರಗಳ ಬಗ್ಗೆ ಹೇಳುವುದಾದರೆ—

---

ದೂರದರ್ಶನಗಳಲ್ಲಿ ಮಧ್ಯಾಹ್ನದ ವೇಳೆ ಪ್ರಸಾರವಾಗುವ ಕಾರ್ಯಕ್ರಮಗಳು ಮಹಿಳೆಯರಿಗೇ ಸಂಬಂಧಿಸಿದವುಗಳು. ಇವು ಹಿಂದಿಯಲ್ಲಿರುತ್ತವೆ. ಪ್ರಾದೇಶಿಕ ಭಾಷೆಗಳಲ್ಲಿ ಸ್ತ್ರೀಯರ ಬಗ್ಗೆ ಕಾಳಜಿ ಇರುವಂಥವರ ಸಲಹೆಯ ಮೇರೆಗೆ ಕಾರ್ಯಕ್ರಮಗಳನ್ನು ರೂಪಿಸಿ ಪ್ರಸಾರ ಮಾಡಿದರೆ ಇವುಗಳ ಲಾಭ ವ್ಯಕ್ತಿಗತವಾಗಿ ಮಾತ್ರವಲ್ಲದೆ, ಸಮಾಜಕ್ಕೂ ಉಂಟು ಎಂಬುದನ್ನು ಅರಿತಿಲ್ಲ. ಜಾಹಿರಾತುಗಳೂ ಸಹ ಬಾಲಿಕೆಯರಿಂದ ಹಿಡಿದು ಪ್ರೌಢ ಮಹಿಳೆವರೆಗೂ ಎಲ್ಲರ ಮನಸ್ಸನ್ನೂ 'ಸೌಂದರ್ಯ' ದೆಡೆಗೇ ಹರಸಿ. ತಮ್ಮ ಉತ್ಪಾದನೆಗಳನ್ನು ಸುಲಭವಾಗಿ ಮಾರಾಟವಾಗವಂತೆ ಮಾಡಲು ಯಶಸ್ವಿಯಾಗಿವೆ. ಹೆಣ್ಣು ಮಕ್ಕಳು ತಮ್ಮ ವಿದ್ಯೆಗೆ, ಜ್ಞಾನಕ್ಕೆ ಪ್ರಾಶಸ್ತ್ಯ ನೀಡುವುದಕ್ಕಿಂತಲೂ ಹೆಚ್ಚಾಗಿ ತಮ್ಮ ಅಂದವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಕಾಲಕಳೆಯುವರಲ್ಲದೆ, ಸಾಹಸಗಳಿಗೆ ಕೈ ಹಾಕುವುದಿಲ್ಲ ಸ್ವಂತ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಹೆದರುತ್ತಾರೆ, ಕಾರಣ ನಾಳೆ ತಮ್ಮ ಮದುವೆಗೆ ಇವುಗಳಿಂದ ಧಕ್ಕೆ ಬಂದರೆ ಎಂಬ ಆತಂಕ.

---

೧) ಹೆಚ್ಚಿನ ಪಾತ್ರಗಳು ವಿವಾಹಿತರಾಗಿರಲಿ, ಅವಿವಾಹಿತರಾಗಿರಲಿ ಮನೆಯ ಕೆಲಸವನ್ನೇ ಮಾಡುತ್ತವೆ.

೨) ಪರಿಸ್ಥಿತಿಯ ಒತ್ತಡಗಳಿಂದಾಗಿ ಉದ್ಯೋಗಸ್ಥ ಮಹಿಳೆಯರೂ ಸಹ ಸದಾ ದುಃಖಿಗಳಾಗಿರುತ್ತಾರೆ. ಬಹಳ ಅಪರೂಪವಾಗಿ ತಮ್ಮ ಕೆಲಸದಲ್ಲಿ ಸಂತೋಷಿಸುತ್ತಾರೆ.

೩) ಮದುವೆ ಹೆಣ್ಣಿಗೆ ವಿಶೇಷ ಸ್ಥಾನಮಾನವೀಯುತ್ತದೆ. ಅವಿವಾಹಿತಳಾಗಿದ್ದರೆ, ಮದುವೆಗೇ ತನ್ನೆಲ್ಲ ಗಮನ ಹರಿಸುತ್ತಾಳೆ. ವಿಧವೆಯಾಗಿದ್ದರೆ, ವಿಚ್ಛೇದಿತೆಯಾಗಿದ್ದರೆ ಸಂತಸದ ಕ್ಷಣಗಳೇ ಕಡಿಮೆ.

೪) ಪುರುಷರೊಂದಿಗೆ ಸ್ತ್ರೀಯ ಸಂಬಂಧವನ್ನು ಚಿತ್ರಿಸುವಾಗ ಹೆಚ್ಚಿನ ಮಹಿಳೆಯರು ಪುರುಷರ ಬೆಂಬಲಗಳಿಂದ ಅವರಿಗೆ ಅವಲಂಬಿತರಾಗಿರುವಂತೆ ಚಿತ್ರಿಸುವುದನ್ನೂ, ಸ್ವ-ಸಾಮರ್ಥ್ಯ ಹಾಗೂ ಆಕ್ರಮಣ ಮನೋಭಾವದ ಹೆಂಗಸರನ್ನು ದೂರವಿಡುವುದನ್ನು ಕಾಣಬಹುದು.

೫) ಕುಟುಂಬ, ಸಮಾಜದ ಸಂಪ್ರದಾಯದ ವಿರುದ್ಧ ನಿಂತು ಹೋರಾಡುವ ಸ್ತ್ರೀಯರು ಜೀವನದ ಕೊನೇ ಗಳಿಗೆಯವರೆಗೂ ನಗು–ಸಂತೋಷಗಳನ್ನು ಕಾಣರು.

೬) ಹೆಣ್ಣುಮಗುವನ್ನು ಬೆಳೆಸುವಾಗ, ಅವಳೂ ತನ್ನದೆ ಆದ ಒಂದು ವ್ಯಕ್ತಿತ್ವವನ್ನು ಪಡೆಯಬೇಕೆಂಬುದಕ್ಕಿಂತಲೂ ಅವಳು ತಾಯ್ತನ ಪಡೆಯುವುದೇ ಹೆಚ್ಚಿನ ಗುರಿ. ಅದಕ್ಕೆ ರಹದಾರಿಯಾದ ಮದುವೆ, ಕುಟುಂಬಗಳೇ ಅವಳಿಗೆ ಸರ್ವಸ್ವ.

ದೂ.ದ.ಗಳಲ್ಲಿ ಮಧ್ಯಾಹ್ನದ ವೇಳೆ ಪ್ರಸಾರವಾಗುವ ಕಾರ್ಯಕ್ರಮಗಳು ಮಹಿಳೆಯರಿಗೇ ಸಂಬಂಧಿಸಿದವುಗಳು. ಇವು ಹಿಂದಿಯಲ್ಲಿರುತ್ತವೆ. ಪ್ರಾದೇಶಿಕ ಭಾಷೆಗಳಲ್ಲಿ ಸ್ತ್ರೀಯರ ಬಗ್ಗೆ ಕಾಳಜಿ ಇರುವಂಥವರ ಸಲಹೆಯ ಮೇರೆಗೆ ಕಾರ್ಯಕ್ರಮಗಳನ್ನು ರೂಪಿಸಿ ಪ್ರಸಾರಮಾಡಿದರೆ ಇವುಗಳ ಲಾಭ ವ್ಯಕ್ತಿಗತವಾಗಿ ಮಾತ್ರವಲ್ಲದೆ, ಸಮಾಜಕ್ಕೂ ಉಂಟು ಎಂಬುದನ್ನು ಅರಿತಿಲ್ಲ. ಜಾಹೀರಾತುಗಳೂ ಸಹ ಬಾಲಿಕೆಯರಿಂದ ಹಿಡಿದು ಪ್ರೌಢ ಮಹಿಳೆಯವರೆಗೂ ಎಲ್ಲರ ಮನಸ್ಸನ್ನೂ "ಸೌಂದರ್ಯ" ದೆಡೆಗೇ ಹರಿಸಿ, ಉತ್ಪಾದನೆಗಳನ್ನು ಸುಲಭವಾಗಿ ಮಾರಾಟವಾಗುವಂತೆ ಮಾಡಲು ಯಶಸ್ವಿಯಾಗಿದೆ. ಹೆಣ್ಣುಮಕ್ಕಳು ತಮ್ಮ ವಿದ್ಯೆಗೆ, ಜ್ಞಾನಕ್ಕೆ ಪ್ರಾಶಸ್ತ್ಯ ನೀಡುವುದಕ್ಕಿಂತಲೂ

ಹೆಚ್ಚಾಗಿ ತಮ್ಮ ಅಂದವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಕಾಲಕಳೆಯುವುದರಲ್ಲದೆ, ಸಾಹಸಗಳಿಗೆ ಕೈ ಹಾಕುವುದಿಲ್ಲ. ಸ್ವಂತ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಹೆದರುತ್ತಾರೆ ಕಾರಣ ನಾಳೆ ತಮ ಮದುವೆಗೆ ಇವುಗಳಿಂದ ಧಕ್ಕೆ ಬಂದರೆ ಎಂಬ ಆತಂಕ. ಅವಳ ಮನೆ, ಸಮಾಜ, ಕಡೆಗೆ ಅವಳು ಓದುವ ಪುಸ್ತಕಗಳು, ಕಾಣುವ, ಕೇಳುವ ಮಾಧ್ಯಮಗಳೂ ಇದನ್ನೇ ಬೋಧಿಸುವುದು. ನಾಳೆ ಆ ಹೆಣ್ಣು ತನ್ನ ಮಕ್ಕಳನ್ನು ಬೆಳೆಸುವುದೂ ಹೀಗೆಯೇ. ಆದ್ದರಿಂದಲೇ ಇಂದು ಸ್ತ್ರೀಯರು ವಿದ್ಯಾವಂತೆಯರಾಗಿದ್ದರೂ ಎಷ್ಟೋ ಮಂದಿ ಹೆಣ್ಣೆಂದರೆ ಹಳೆಯ ಜಾಡನ್ನೇ ಹಿಡಿಯುತ್ತಾರೆ. ಅನಕ್ಷರಸ್ಥರೂ, ಅಕ್ಷರಸ್ಥರೂ ಭೇದವಿಲ್ಲದೆ ವೀಕ್ಷಿಸುವದೂ, ದ.ಗಳು ತಮ್ಮ ಹೊಣೆಯರಿತು, ನಿರ್ಮಾಪಕರು, ಕಾರ್ಯಕ್ರಮದ ನಿರ್ದೇಶಕರು ಮತ್ತು ಬರಹಗಾರರ ಬಗ್ಗೆ ಹೆಚ್ಚು ಜಾಗ್ರತೆ ವಹಿಸಿ, ಆರೋಗ್ಯಕರ ಸಮಾಜ ನಿರ್ವಹಣೆಗೆ ಈಗಿನಿಂದಲಾದರೂ ಮನ ಹರಿಸಿದರೆ ನಿಧಾನವಾಗಿಯಾದರೂ ಮುಂದೊಂದು ದಿನ ಗುರಿ ಮುಟ್ಟಲು ಸಾಧ್ಯವಾಗುತ್ತದೆ.

**ಪುಸ್ತಕಗಳು:**

ಶಿಕ್ಷಣದ ಮೂಲೋದ್ದೇಶ ಮಕ್ಕಳ ದೈಹಿಕ ಬೆಳವಣಿಗೆ, ಮಾನಸಿಕ ಅರಿವನ್ನು ಹೆಚ್ಚಿಸುವುದು, ನೈತಿಕ ಮೌಲ್ಯಗಳನ್ನು ಕಾಪಾಡಿಕೊಳ್ಳುವುದು, ಆ ಮೂಲಕ ಸಮಾಜದ ಅಭಿವೃದ್ಧಿಗೆ ಪೂರಕವಾಗುವುದು ಆದ್ದರಿಂದಲೇ ಶಿಕ್ಷಣವೆಂದರೆ ಜೀವನಕ್ಕಾಗಿ ಜೀವನದ ಮೂಲಕ ಜೀವನದುದ್ದಕ್ಕೂ ಎನ್ನುತ್ತಾರೆ. ಹದ ಮಾಡಿದ ಮಣ್ಣನ್ನು ಕುಂಬಾರ ಬೇಕಾದ ಆಕಾರಕ್ಕೆ ತರುವಂತೆ ಮಕ್ಕಳ ಮನಸ್ಸನ್ನು ಹೇಗೆ ಬೇಕಾದರೂ ರೂಪಿಸಬಹುದು, ಈ ಪಾಠಗಳು, ವಿದ್ಯಾಭ್ಯಾಸಗಳು ಅವರ ಜೀವನದುದ್ದಕ್ಕೂ ಹಿಂಬಾಲಿಸುತ್ತವೆ.

ಶಿಕ್ಷಕರು ಮಕ್ಕಳಿಗೆ ಬೋಧಿಸುವ ಮೌಲ್ಯಗಳು ಸಮಾಜದ ಮೇಲೆ ಬೀರುವ ಪರಿಣಾಮಗಳನ್ನು ಕೆಳಕಂಡ ಉದಾಹರಣೆಗಳು ಸ್ಪಷ್ಟಪಡಿಸುತ್ತವೆ

೧೯ ನೇ ಶತಮಾನದ ಅಂತ್ಯದಲ್ಲಿ ವಲಸೆ ಬಂದವರ ಮಕ್ಕಳನ್ನು ಪೂರ್ಣವಾಗಿ ಅಮೇರಿಕನ್ನರಾಗಿ ಬದಲಾಯಿಸಿದ ಕೀರ್ತಿ ಅಂದಿನ ಬೋಧಕವೃಂದದ್ದು. ಫ್ರಾನ್ಸ್‌ನಲ್ಲಿ ಜಾತ್ಯಾತೀತತೆಯನ್ನು ಬೋಧಿಸುವ ಹೆಸರಿನಲ್ಲಿ ಕ್ಯಾಥೋಲಿಕ್ ಹಾಗೂ ಅಲ್ಲಿನ ಶಾಲೆಗಳ ನಡುವೆ ಬಿರುಕು ಮೂಡಿಸಲು ಹಾಗೂ ಈ ಬಿರುಕು ಅವುಗಳಿಂದ ತಯಾರಾಗಿ ಬಂದ ನವ ಯುವಕರಲ್ಲೂ ಒಡಕುಂಟುಮಾಡಲು ಉದ್ದೇಪೂರ್ವಕವಾಗಿ ಶಿಕ್ಷಣವನ್ನೇ ಬಳಸಲಾಗಿತ್ತು. ೧೯೪೪ರಲ್ಲಿ ಬ್ರಿಟನ್‌ನಲ್ಲಿ ಮಕ್ಕಳಿಗೆ ಪ್ರಾರ್ಥನೆಯಿಂದ, ಪೂಜೆಯಿಂದ ಪ್ರಾರಂಭಿಸಿ, ಧಾರ್ಮಿಕ ನೀತಿ–ರೀತಿಗಳನ್ನು ಪ್ರತಿಹಂತದಲ್ಲೂ ಆಚರಣೆಗೆ ತರಲು ಉದ್ದೆಶಪೂರ್ವಕವಾಗಿ ಆದೇಶಿಸಿತ್ತು, ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಮಕ್ಕಳಿಗೆ ಮಾರ್ಕ್ಸಿಸಂ ಅನ್ನು ಬೋಧಿಸಲಾಗುತ್ತಿತ್ತು.

ಹಿಂದಿನ ಶಿಕ್ಷಣ ಪದ್ಧತಿಯಲ್ಲಿ ದೊಡ್ಡವರು ಹೇಳಿದ್ದನ್ನು ಪ್ರಶ್ನಿಸದೆ ಕೇಳುವುದು ಶಿಸ್ತೆಂದು ಹೇಳಲಾಗಿತ್ತು. ಇಲ್ಲಿ ವೈಯಕ್ತಿಕ ಅಭಿವೃದ್ಧಿಗೆ ಆಲೋಚನೆಗೆ ಆಸ್ಪದವಿರಲಿಲ್ಲ. ಬ್ರಿಟಿಷರಿಂದ ಜಾರಿಯಾದ "ಮಾದರಿ ಶಿಕ್ಷಣ" ಪದ್ಧತಿಯಲ್ಲಿ ಜಾತ್ಯಾತೀತೆ, ಧರ್ಮನಿರಪೇಕ್ಷತೆ, ಸಮಾನತೆಯ ಅಂಶಗಳಿದ್ದರೂ ಹಳ್ಳಿಗಳಲ್ಲಿ ಸ್ವಾತಂತ್ರ್ಯ ನಂತರವಷ್ಟೇ ಇದು ಬಳಕೆಗೆ ಬಂದದ್ದು. ಈಗ ಕಡ್ಡಾಯ ಶಿಕ್ಷಣವನ್ನು ಪ್ರಾರಂಭಿಸಿಯಾಗಿದ್ದರೂ, ಪ. ಜಾತಿ, ಪ. ವರ್ಗದವರಿಗೆ ಉಚಿತ ವಿದ್ಯಾಭ್ಯಾಸ ಒದಗಿಸಲು ಸರಕಾರ ಮುಂದೆ ಬಂದಿದ್ದರೂ ಅನಕ್ಷರತೆ ಕಡಿಮೆಯಾಗಿಲ್ಲ. ಮಕ್ಕ

---

ವಿದ್ಯಾವಂತ ನಿರುದ್ಯೋಗಿಗಳ ಪಾಡನ್ನು ಕಂಡ ಮಂದಿ ನಾಳೆ ತಮ್ಮ ಮಕ್ಕಳ ವಿದ್ಯಾಭ್ಯಾಸ, ನಂತರ ಉದ್ಯೋಗಕ್ಕಾಗಿ ಪರದಾಡಿ ಅವರ ಹಾದಿಯೇ ಹಿಡಿಯಬೇಕಾದೀತು ಎಂಬ ಮನೋಭಾವ ಗ್ರಾಮೀಣ ಜನರಲ್ಲಿ ಬೇರೂರಿರುವುದರಿಂದ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಅವರನ್ನು ಕಿತ್ತುತಿನ್ನುವ ಬಡತನ ಆ ಬಡಪಾಯಿಗಳನ್ನು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದಿರುವಂತೆ ಮಾಡಿದೆ. ದೊಡ್ಡವರಾಗಿ ಉದ್ಯೋಗಕ್ಕೆ ಪರದಾಡುವುದಕ್ಕಿಂತಲೂ ಈಗಲೇ ದುಡಿಯುವ ಅಭ್ಯಾಸವಾದರೆ ಇಂದು ತಮ್ಮ ಕುಟುಂಬಕ್ಕೆ ನಾಳೆ ಅವರ ಜೀವನಕ್ಕೂ ಒಳ್ಳೆಯದು ಎಂಬ ನಂಬಿಕೆ. ಗಂಡು ಮಕ್ಕಳ ಬಗ್ಗೆ ಹೀಗೆ ಯೋಚಿಸುವವರು ಹೆಣ್ಣು ಮಕ್ಕಳ ಬಗ್ಗೆ ಇದಕ್ಕಿಂತಲೂ ಭಿನ್ನವಾಗಿ ಯೋಚಿಸಲು ಸಾಧ್ಯವೆ? ಆದ್ದರಿಂದ ಈ ಸ್ಥಿತಿ ದೂರಾಬೇಕಾದರೆ ಅವರ ಬಡತನ ದೂರವಾಗಬೇಕು-

---

ಪಿಲ್ಲೈಜಿ.ಕೆ. ಮತ್ತು ರಾಜೇಶ್ವರಿಕೆ. ೧೯೮೪ ರಲ್ಲಿ ತಮಿಳ್ನಾಡಿನಲ್ಲಿ ನಡೆಸಿದ ಸಮೀಕ್ಷೆಯಲ್ಲಿ ೧–೧೦ ವರೆಗಿನಪಠ್ಯಗಳಲ್ಲಿನ ಲಿಂಗಭೇದ:

| ವಿಷಯಗಳು | ಪಾತ್ರಗಳು | ಜೀವನಚರಿತ್ರೆ | ಶೀರ್ಷಿಕೆಗಳು | ಉಲ್ಲೇಖಗಳು | ಹೆಸರುಗಳು |
|---|---|---|---|---|---|
| | ಸ್ತ್ರೀ-ಪು | ಸ್ತ್ರೀ-ಪು | ಸ್ತ್ರೀ-ಪು | ಸ್ತ್ರೀ-ಪು | ಸ್ತ್ರೀ-ಪು |
| ತಮಿಳು | 39–104 | 2–31 | 4–12 | 82–288 | 590–3281 |
| ಇಂಗ್ಲೀಷ್ | 26–163 | 3–8 | 6-16 | 264-760 | 642-2695 |
| ಇತಿಹಾಸ | 43-237 | 1-39 | 0–0 | 12-172 | 302-5801 |
| ಗಣಿತ | 5–17 | 0–4 | 0–0 | 24-53 | 58-252 |
| ವಿಜ್ಞಾನ | 8–34 | 0-3 | 0–0 | 44–171 | 4–335 |
| ಭೂಗೋಳ | 7-13 | 0-0 | 0-0 | 23-35 | 7-53 |
| ಒಟ್ಟುಮೊತ್ತ | 128–568 | 6-85 | 10-28 | 449–1479 | 1603-12417 |
| ಸರಾಸರಿ(ಶೇ) | 18-82 | 7-93 | 26-74 | 23-77 | 11-89 |

ಳನ್ನು, ಅವರ ಹೆತ್ತವರನ್ನು ಆಕರ್ಷಿಸಲು ಮಧ್ಯಾಹ್ನದ ಊಟದ ವ್ಯವಸ್ಥೆಯೂ ಸಫಲವಾಗಿಲ್ಲ. ಗ್ರಾಮೀಣ ಮಕ್ಕಳು ಶಾಲೆ ಬಿಡುವ ಶಾಪದಿಂದ ಮುಕ್ತರಾಗಿಲ್ಲ. ವಿದ್ಯಾವಂತ ನಿರುದ್ಯೋಗಿಗಳ ಪಾಡು ತಮ್ಮ ಮಕ್ಕಳ ವಿದ್ಯಾಭ್ಯಾಸ-ನಂತರ ಉದ್ಯೋಗಕ್ಕಾಗಿ ಪರದಾಡಿ ಅವರ ಹಾದಿಯೇ ಹಿಡಿಯಬೇಕಾದೀತು — ಎಂಬ ಮನೋಭಾವ ಗ್ರಾಮೀಣ ಜನರಲ್ಲಿ ಬೇರೂರಿರುವುದರಿಂದ ಮತ್ತು ಸಧ್ಯದ ಪರಿಸ್ಥಿತಿಯಲ್ಲಿ ಅವರನ್ನು ಕಿತ್ತು ತಿನ್ನುವ ಬಡತನ ಆ ಬಡಪಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸದಿರುವಂತೆ ಮಾಡಿದೆ. ದೊಡ್ಡವರಾಗಿ ಉದ್ಯೋಗಕ್ಕೆ ಪರದಾಡುವುದಕ್ಕಿಂತಲೂ ಈಗಲೇ ದುಡಿಯುವ ಅಭ್ಯಾಸವಾದರೆ ಇಂದು ತಮ್ಮ ಕುಟುಂಬಕ್ಕೂ ನಾಳೆ ಅವರ ಜೀವನಕ್ಕೂ ಒಳ್ಳೆಯದು ಎಂಬ ನಂಬಿಕೆ. ಗಂಡುಮಕ್ಕಳ ಬಗ್ಗೆಯೇ ಹೀಗೆ ಯೋಚಿಸುವವರು ಹೆಣ್ಣುಮಕ್ಕಳ ಬಗ್ಗೆ ಇದಕ್ಕಿಂತಲೂ ಭಿನ್ನವಾಗಿ ಯೋಚಿಸಲು ಸಾಧ್ಯವೆ? ಆದ್ದರಿಂದ ಈ ಸ್ಥಿತಿ ದೂರವಾಗಬೇಕಾದರೆ ಅವರ ಬಡತನ ದೂರವಾಗಬೇಕು. ೧೯೫೧–೭೧ರಲ್ಲಿ ಶೇ.೮ರಷ್ಟಿದ್ದ ಸ್ತ್ರೀಯರ ಅನಕ್ಷರತೆ ಶೇ. ೧೮.೬ಕ್ಕೇರಿತು. ಒಟ್ಟಾರೆ ಕುಟುಂಬಗಳ ಅನಕ್ಷರತೆ ೧೫೮.೭ ಮಿಲಿಯನ್ — ೨೧೪.೭ಮಿ. ಅನಕ್ಷರಸ್ಥ ಮಹಿಳೆಯರಲ್ಲಿ ಹೆಚ್ಚಿನವರು ಯುವ ವಯಸ್ಸಿನವರು. ಶೇ. ೬೭.೫ — ೧೫ರಿಂದ ೨೪ರ ವಯೋಮಾನದವರು. ಶೇ.೮೮.೬ — ೨೫ರ ವಯಸ್ಸಿನವರು. ದೇಶದ ೩೫೨ ಜಿಲ್ಲೆಗಳಲ್ಲಿ(೧೯೭೧ರಲ್ಲಿ)—ಶೇ.೫ರಷ್ಟು ಅಕ್ಷರಸ್ಥ ಮಹಿಳೆಯರು ೮೩ ಜಿಲ್ಲೆಗಳಲ್ಲಿ, ಶೇ ೫ ರಿಂದ ೭.೫–೫೮ ಜಿಲ್ಲೆಗಳಲ್ಲಿ, ಶೇ. ೭.೫—ಶೇ. ೧೦—೫೫ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಒಟ್ಟಾರೆ ೩೫೨ ಜಿಲ್ಲೆಗಳಲ್ಲಿ ೧೯೬ಜಿಲ್ಲೆಗಳಲ್ಲಿ ಶೇ. ೧೦ರಷ್ಟು ಅನಕ್ಷರಸ್ಥ ಸ್ತ್ರೀಯರಿದ್ದಾರೆ. ಕುಟುಂಬದ ಅನಕ್ಷರತೆಯನ್ನು ಅಕ್ಷರಸ್ಥ ಸ್ತ್ರೀ ದೂರಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ.

ಅಕ್ಷರದ ಮಹತ್ವವನ್ನು ಜನರಿಗೆ ಬೋಧಿಸುವಾಗ ನಾವು ಇನ್ನೊಂದು ಅಂಶದೆಡೆಗೂ ಗಮನ ಹರಿಸಬೇಕು. ಅದೇನೆಂದರೆ ಪುಸ್ತಕ, ನಿಯತಕಾಲಿಕ, ವೃತ್ತ ಪತ್ರಿಕೆಗಳು, ಶಿಶುಸಾಹಿತ್ಯಗಳಲ್ಲಿ ಲಿಂಗಭೇದ ಮಾಡುವ ಬಗ್ಗೆ. ಇತ್ತೀಚಿನ ಸಮೀಕ್ಷೆಯಂತೆ ಶೇ.೮೦ರಷ್ಟು ಕಥೆ, ಕಾದಂಬರಿಗಳಲ್ಲಿ ಗಂಡಸು ಸಾಹಸಿ, ಕೆಲಸಗಾರ ಹಾಗೂ ತಮ್ಮ ಗುರಿಮುಟ್ಟಲು ಸದಾ ಕಾರ್ಯಮಗ್ನನಾಗಿರುವ ನಾಯಕನಂತೆ ವರ್ಣಿಸಲ್ಪಟ್ಟರೆ, ಹೆಣ್ಣು ಮನೆಯನ್ನು ಮಾತ್ರ ನೋಡಿಕೊಳ್ಳುವವಳಂತೆ ವರ್ಣಿಸಲ್ಪಟ್ಟಿದೆ. ಈ ಮಾತು ಪಠ್ಯಪುಸ್ತಕಗಳಿಗೂ ಅನ್ವಯಿಸುತ್ತದೆ.

(ಪುಟದ ಮೇಲ್ಗಡೆ ತಮಿಳ್ನಾಡಿನಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರ ಅಸಮಾನತೆಯ ಅಂಕಿ ಅಂಶಗಳನ್ನು ನೀಡಲಾಗಿದೆ.)

ಆಂಧ್ರಪ್ರದೇಶದಲ್ಲಿ ೬, ೭ ನೇ ತರಗತಿಗೆ ನಿಗದಿ ಮಾಡಲಾದ ಪಠ್ಯ ಪುಸ್ತಕಗಳಲ್ಲಿನ ಲಿಂಗಭೇದದ ಬಗ್ಗೆ ಅಧ್ಯಯನ ನಡೆಸಲಾಯಿತು. ಆರಿಸಿದ ೪೦ ಮಂದಿ ಶಿಕ್ಷಕರು ತೆಲುಗು ಮತ್ತು ಇಂಗ್ಲಿಷ್ ಭಾಷಾಜ್ಞಾನದ ತರಗತಿಗಳಿಗೆ ಬೋಧಿಸುವುದರ ಜೊತೆಗೆ ಆ ಮಕ್ಕಳಿಗೆ ಶಿಶುಸಾಹಿತ್ಯಗಳಾದ ಬಾಲಮಿತ್ರ, ಬೊಮ್ಮರಿಲ್ಲು, ಚಂದಮಾಮಾಗಳನ್ನ ಪೂರೈಸಲಾಯ್ತು. ಇಲ್ಲಿ ಕಥೆಗೆ ಪ್ರಾಮುಖ್ಯತೆ ಕೊಡದೆ ಅದರಲ್ಲಿ ಬರುವ ಪಾತ್ರಗಳು, ಉದ್ಯೋಗ, ಕಲ್ಪನೆಗಳಿಗೆ ಮಹತ್ವ ನೀಡಲಾಯಿತು. ಈ ಅಧ್ಯಯನ ಆಂ. ಪ್ರ.ದ ರಾಯಲಸೀಮ, ತೆಲಂಗಾಣ ಮತ್ತು ಆಂಧ್ರ ಜಿಲ್ಲೆಗಳ ಪ್ರಥಮಿಕ ಶಾಲೆಗಳಲ್ಲಿ ನಡೆಯಿತು, ಮಕ್ಕಳ ಅಭಿಪ್ರಾಯವನ್ನು ಆಭ್ಯಸಿಸಿದಾಗ, —

ಕರುಣೆ. ಪ್ರೀತಿಸುವ ಮನೋಭಾವ, ವಿಶ್ವಾಸಿ, ಅವಲಂಬಿತಳು ಸ್ವ–ಬಲಿದಾನಮಾಡುವವಳು, ನಂಬಿಕೆಗೆ ಅರ್ಹಳಾದ, ಸಾಂಸ್ಕೃತಿಕ-ಧಾರ್ಮಿಕ ಗುಣಗಳನ್ನು ಹೊಂದಿರುವವಳು ಸಂತೋಷಚಿತ್ತ. ಕಲ್ಪನಾಮನೋಭಾವ ಹೊಂದಿರುವ, ತಾಯ್ತನದ ಕರ್ತವ್ಯಗಳಿಗೆ ತನ್ನೆಲ್ಲವನ್ನೂ ಧಾರೆಯೆರೆಯುವವಳು, ಮುಗ್ಧತೆ, ಸತ್ಯಪರತೆ, ಆಕರ್ಷಕಳು, ಪವಿತ್ರತೆ, ಸರಳತೆ, ಕಲಾವಂತಿಕೆ, ಶಿಸ್ತಿನಾಕೆ, ಜಾಣ್ಮೆಯುಳ್ಳವವಳು, ಶಾಂತಿಯನ್ನು ಬಯಸುವವಳು ಎಂಬ ಕಲ್ಪನೆಗಳಿದ್ದುದು ಕಂಡುಬಂದಿತು.

ಗಂಡಸರು ಸ್ವತಂತ್ರರು, ಧೈರ್ಯಶಾಲಿಗಳು, ಸ್ತ್ರೀಯರು ಅವಲಂಬಿತರು ಎಂಬುದನ್ನು ಈ ಎರಡು ಅಂಕಿ-ಅಂಶಗಳಲ್ಲಿ ಪ್ರತಿಪಾದಿಸಲಾಗಿದೆ.

ಬಾಲಕ ಬಾಲಕಿಯರಿಗೆ ಉಪಯುಕ್ತ, ಅನುಪಯುಕ್ತವಾದ ಕಲ್ಪನೆಗಳನ್ನಿಲ್ಲಿ ನೀಡಲಾಗಿದೆ:

| ಕಲ್ಪನೆಗಳು | ಪುರುಷ | ಸ್ತ್ರೀ | ಒಟ್ಟು |
|---|---|---|---|
| ಉಪಯುಕ್ತ | 68 | 32 | 100ಶೇ |
| ಅನುಪಯುಕ್ತ | 46 | 54 | 100ಶೇ |

ಸಾಮಾಜಿಕ ಪಾತ್ರಗಳು

| ಪುರುಷ ಪಾತ್ರ | ಒಟ್ಟು | ಸ್ತ್ರೀ ಪಾತ್ರ | ಒಟ್ಟು |
|---|---|---|---|
| ಗಂಡ | 36ಶೇ | ಪತ್ನಿ | 71ಶೇ |
| ತಂದೆ | 32ಶೇ | ತಾಯಿ | 71ಶೇ |
| ಮಗ | 60ಶೇ | ಮಗಳು | 72ಶೇ |
| ಅಂಕಲ್ | 14ಶೇ | ಆಂಟಿ | 46ಶೇ |
| ಗೆಳೆಯ | 66ಶೇ | ಗೆಳತಿ | 57ಶೇ |
| ಪ್ರೇಮಿ | 8ಶೇ | ಪ್ರೇಮಿ | 20ಶೇ |
| ಕುಟುಂಬದ ಮುಖ್ಯಸ್ಥ | 36ಶೇ | ಕುಟುಂಬದ ಮುಖ್ಯಸ್ಥ | 4ಶೇ |

ಪುರುಷನ ಕಲ್ಪನೆ: ಧೈರ್ಯ, ಶಕ್ತಿ, ದಯಾಳು, ಜನಪ್ರಿಯತೆ, ಸಾಹಸ, ಔದಾರ್ಯ, ಕಷ್ಟಪಡುವವ, ವಿದ್ಯಾವಂತ, ಶುದ್ಧವ್ಯಕ್ತಿತ್ವದವ, ಪ್ರಮಾಣಿಕತನ, ಬುದ್ಧಿವಂತ, ಅನ್ಯಾಯವನ್ನು ವಿರೋಧಿಸುವವ, ಆಕರ್ಷಕ ವ್ಯಕ್ತಿತ್ವದ ಸ್ವತಂತ್ರ ಮನೋಭಾವದವ, ಆಕ್ರಾಚಾರವುಳ್ಳವ, ರಾಜಕೀಯದಲ್ಲಿ ಪಾಲ್ಗೊಳ್ಳುವ ಅಧಿಕಾರ ಚಲಾಯಿಸುವವ ಹಾಗೂ ಕೌಶಲ್ಯವುಳ್ಳವ........ ಇತ್ಯಾದಿ.

ಸ್ತ್ರೀಯರ ಬಗ್ಗೆಗಿನ ಕಲ್ಪನೆಗಳು: ಸೌಂದರ್ಯ.

ಔದ್ಯೋಗಿಕ ಅಂಕಿ ಅಂಶಗಳಿಂದ (ಪುಟ:೧೫) ಪುರುಷರು ಸಾರ್ವಜನಿಕ ವಲಯಕ್ಕೆ ಸೇರಿದ ವೃತ್ತಿಗಳಲ್ಲಿ ತೊಡಗುವ ಮೂಲಕ ತಮ್ಮ ಪ್ರತಿಷ್ಠೆ, ಗೌರವಗಳನ್ನು ಹೆಚ್ಚಿಸಿಕೊಳ್ಳುವುದರೊಂದಿಗೆ ಸಾಕಷ್ಟು ಸಮಯಾವಕಾಶವಿರುವುದರಿಂದ ಇನ್ನಿತರ ಕೆಲಸಗಳಲ್ಲೂ ತೊಡಗುವ ಅವಕಾಶ ಪಡೆದಿದ್ದಾರೆ. ಸ್ತ್ರೀಯರಿಗೆ ಖಾಸಗಿ ಯಂತಿರುವ ಕೆಲಸಗಳು ಮತ್ತು ಇವಕ್ಕೆ ಚಾಕಚಕ್ಯತೆ, ಹೆಚ್ಚಿನ ಜವಾಬ್ದಾರಿ ಅಥವಾ ಬುದ್ಧಿಮತ್ತೆಯಾಗಲಿ ಬೇಕಿಲ್ಲ. ಪಠ್ಯ ಪುಸ್ತಕಗಳು, ಶಿಶು

ಉದ್ಯೋಗದಲ್ಲಿ

| ಉದ್ಯೋಗಗಳು | ಪುರುಷ | ಸ್ತ್ರೀ |
|---|---|---|
| ರಾಜ, ರಾಣಿ, ಯೋಧ ಸೈನಿಕ | ಶೇ8 | ಶೇ14 |
| ಕತೆಗಾರ, ತತ್ವಶಾಸ್ತ್ರಜ್ಞ, ಶಿಕ್ಷಣಕ್ಷೇತ್ರ | ಶೇ28 | ಶೇ14 |
| ವಿಜ್ಞಾನಿ, ವೈದ್ಯಕೀಯ, ನರ್ಸ್ | ಶೇ28 | ಶೇ29 |
| ಸಾಹಸ, ಅನ್ವೇಷಣೆ | ಶೇ11 | — |
| ರಾಜಕೀಯನಾಯಕತ್ವಸಮಾಜಸುಧಾರಣೆ | ಶೇ25 | ಶೇ14 |
| ಗೃಹಕೃತ್ಯ | — | ಶೇ29 |

ಕಾರ್ಮಿಕ ಕ್ಷೇತ್ರದಲ್ಲಿ ಲಿಂಗಾಧಾರಿತ ವಿಭಜನೆ:—

| ಉದ್ಯೋಗ | ಪುರುಷ | ಮಹಿಳೆ |
|---|---|---|
| ಬೇಟೆ | 166 | 13 |
| ಮೀನುಗಾರಿಕೆ | 98 | 4 |
| ವ್ಯವಸಾಯ | 73 | 13 |
| ಕಟ್ಟಡ ನಿರ್ಮಾಣ | 14 | 6 |
| ಸಾಕುಪ್ರಾಣಿಗಳನ್ನು ನೋಡಿಕೊಳ್ಳುವುದು | 8 | 39 |
| ಬೆಳೆಯ ಕೊಯ್ಲು ಮತ್ತು ಸಂಗಹ್ರಣೆ | 10 | 44 |
| ಚಿಪ್ಪುಗಳನ್ನು ಆಯುವುದು | 4 | 25 |
| ಉರುವಲು ಸಂಗ್ರಹಣೆ | 2 | 74 |
| ಆಹಾರ ಸಿದ್ಧ ಪಡಿಸುವುದು | 2 | 74 |
| ಅಡಿಗೆ ಮಾಡುವುದು | 5 | 85 |
| ನೀರುತರುವುದು, | 13 | 114 |

ನಿರ್ಮಲೀಕರಣ ಅರೆಯುವುದು ಇತ್ಯಾದಿ

ಇನ್ನು ಬಾಲಬೋಧನೆಗೆ ಸಂಬಂಧಿಸಿದವುಗಳನ್ನು ನೋಡೋಣ:—

| ಉದ್ಯೋಗ | ಪುರುಷ | ಸ್ತ್ರೀ |
|---|---|---|
| ಆಡಳಿತಾತ್ಮಕ | ಶೇ84 | ಶೇ16 |
| ವಾಣಿಜ್ಯ | ಶೇ91 | ಶೇ9 |
| ಧಾರ್ಮಿಕ | ಶೇ89 | ಶೇ11 |
| ಗೃಹಕೃತ್ಯ | — | ಶೇ100 |
| ಕಲಾತ್ಮಕ | ಶೇ90 | ಶೇ10 |
| ಔದ್ಯೋಗಿಕ | ಶೇ95 | ಶೇ5 |

ಸಾಹಿತ್ಯಗಳು. ಬೋಧಿಸುವುದನ್ನೇ ಶಾಲೆಯ ಪರಿಸರವೂ ಪೋಷಿಸುತ್ತದೆ. ಆದ್ದರಿಂದಲೇ ಇಂದೂ ಸಹ ಗಂಡುಮಕ್ಕಳು ಔದ್ಯೋಗಿಕ, ಆಡಳಿತಾತ್ಮಕ ಶಿಕ್ಷಣ ಪಡೆದರೆ, ಹೆಣ್ಣುಮಕ್ಕಳು ಗೃಹಕೃತ್ಯಕ್ಕೆ, ಗುಮಾಸ್ತಗಿರಿಗೆ ಸಂಬಂಧಿಸಿದ ವಿಷಯಗಳಿಗೆ ಗಮನ ಹರಿಸುವಂತೆ ಮಾಡಲಾಗುತ್ತಿದೆ. ಹಾಗಾಗಿಯೇ ಲಿಂಗಭೇದ ಅನೂಚಾನವಾಗಿ ನಡೆದು ಬಂದಿದೆ ಎನ್ನಬಹುದು. ಬಾಲಕ-ಬಾಲಕಿಯರು ಸಮಾನರೆಂದು ಎಲ್ಲಿಯೂ ಪ್ರತಿಪಾತಿಸುವುದಿಲ್ಲ. ೧೯೬೮ರಲ್ಲಿ "ಇಂಡಿಯನ್ ಎಜುಕೇಷನ್ ಪಾಲಿಸಿ"ಯ ಪಠ್ಯಪುಸ್ತಕಗಳ ತಜ್ಞರು ಅನೂಚಾನವಾಗಿ ನಡೆದು ಬಂದಿರುವ ಹೆಣ್ಣಿನ ಕೀಳರಿಮೆಗೆ ಒತ್ತುಕೊಡುವ ಶಿಕ್ಷಣವನ್ನು ಟೀಕಿಸಿದ್ದರು.

"ಬಾಲಕ-ಬಾಲಕಿಯರ ನಡುವೆ ಅಸಮಾನತೆ ಬೋಧಿಸುವ ಶಿಕ್ಷಣ ಮಾನಸಿಕ ಅಸಮಾನತೆಗೆ ಕಾರಣವಾಗುವುದನ್ನು, ಅದರಿಂದ ಸಮಾಜದ ಸ್ಥಿತಿ-ಗತಿಯ ಮೇಲಾಗುವ ಪರಿಣಾಮಗಳನ್ನು ಪ್ರಚಾರಮಾಡಿ, ಜನರಿಗೂ ಸಹ ಬದಲಾವಣೆ ಹೊಂದದ ವ್ಯಕ್ತಿತ್ವದ ಸ್ತ್ರೀ-ಪುರುಷರಿಂದ ಸಮಾಜಕ್ಕೆ ಹಾನಿಯೇ ಹೊರತು ಒಳ್ಳೆಯದಲ್ಲ ಎಂಬುದನ್ನು ಮನಗಾಣಿಸಬೇಕು" ಎಂದಿದೆ ಕಮಿಷನ್.

ಉದ್ಯೋಗರಂಗದಲ್ಲಿಯೂ ಸಹ ಪುರುಷರಿಗೆ ಕೌಶಲ್ಯದ ಅಗತ್ಯವಿರುವ ಡಾಕ್ಟರ್, ಇಂಜಿನಿಯರ್, ಸಂಶೋಧಕ, ಲಾಯರ್, ಸಾಹಸ, ಪ್ರಧಾನವಾದಂತಹವುಗಳನ್ನು ಹೇಳಿದರೆ, ಸ್ತ್ರೀಯರಿಗೆ ಮಾತೃತ್ವಕ್ಕೆ ತಾಳ್ಮೆಗೆ ಪ್ರಾಶಸ್ತ್ಯವಿರುವಂತಹ ಅಡಿಗೆ ಮಾಡುವುದು ಆಹಾರಪೂರೈಕೆ, ನಿರ್ಮಲೀಕರಣ, ಮಕ್ಕಳ ಮೇಲ್ವಿಚಾರಣೆ ಅಬಲರು ರೋಗಿಗಳ ಸೇವೆ, ಮಾಡುವ ದಾದಿ, ಡಾಕ್ಟರ್ (ಇಲ್ಲಿ ಪುರುಷರಿಗಿಂತ ಭಿನ್ನವಾಗಿ ಎಂದರೆ ಈ ಹುದ್ದೆಗೆ ಬುದ್ಧಿ ವಿಚಾರವಂತಿಕೆಗಿಂತ ಸ್ತ್ರೀಯರಿಗೆ ಸಹನೆ ಹೆಚ್ಚು ಆದ್ದರಿಂದ ಆ ಹುದ್ದೆಗೆ ಅವರು ಲಾಯಕ್ಕು ಎನ್ನಲಾಗುತ್ತದೆ.) ಶಾಲಾಶಿಕ್ಷಕಿ, ಟೆಲಿಫೋನ್ ಆಪರೇಟರ್ ಅಂತಹ ಹೆಣ್ತನದ ಅಂಶಗಳಿರುವ ಹುದ್ದೆಗಳಿಂದಾಚೆಗೆ ಅವರ ಗಮನ ಹರಿಯದಂತೆ ಮಾಡಲಾಗುತ್ತದೆ.

ಹೀಗೆ ಯಾವುದೇ ದೃಷ್ಟಿಯಿಂದ ನೋಡಿದರೂ ಪಠ್ಯಪುಸ್ತಕಗಳು, ಶಿಶುಸಾಹಿತ್ಯಗಳು ಹೇಳಿದ್ದನ್ನೇ ಹೇಳುವ ಜಾಡಿನಲ್ಲೇ ನಡೆಯುತ್ತಿದೆ. ಯಾವುದೇ ದೃಷ್ಟಿಕೋನದಿಂದ ನೋಡಿದರೂ ನೀನು ಮೇಲ್ಮಟ್ಟದವಳಲ್ಲ, ನಿನ್ನ ಕನಸುಗಳಿಗೂ ಮಿತಿ ಇರಬೇಕು. ಕೆಲಸಗಾತಿಯಂತೆ ಇರಬೇಕು. ಇದ್ದುದರಲ್ಲಿ ತೃಪ್ತಿಪಡಬೇಕು, ಹೇಗಿದ್ದರೂ ಮತ್ತೊಂದು ಕುಟುಂಬಕ್ಕೆ ಸೇರಿದವಳು ನೀನು ಮಗನನ್ನು ಪಡೆದರೆ ನಿನ್ನ ಮುದಿತನದಲ್ಲಿ ಆಸರೆಯಾಗುವನು....... ಇಂಥ ಕಲ್ಪನೆಗಳಿಗೆ ಜೀವ ಕೊಡುವುದರಲ್ಲಿ ನಿರತವಾಗಿ ಅದರಲ್ಲಿ ಇಂದಿನವರೆಗೂ ಯಶಸ್ವಿಯಾಗಿವೆ ಎಂದೇ ಹೇಳಬಹುದು. ಇದಕ್ಕಿಂತ ಭಿನ್ನ ವ್ಯಕ್ತಿತ್ವ ಬೆಳೆಸಿಕೊಳ್ಳಲು ಹೊರಡುವ ಹೆಣ್ಣುಮಗಳು ಎದುರಿಸಬೇಕಾಗಿ ಬರುವ ಕಷ್ಟ-ನಷ್ಟಗಳು ಒಂದೆರಡಲ್ಲ.

ಆಟದಲ್ಲಿ ಇನ್ನಿತರ ಚಟುವಟಿಕೆಗಳಲ್ಲಿ ತೊಡಗಿ ಹುಡುಗರು ತಮ್ಮ ದೈಹಿಕ ಬಲವನ್ನ ವೃದ್ಧಿಸಿಕೊಂಡರ ಬಾಲಕಿಯರು ತಮ್ಮ ಚಟುವಟಿಕೆಗಳನ್ನು ನೋಟಕ್ಕೆ ಸೀಮಿತಗೊಳಿಸುತ್ತಾರೆ. ಈ ಸ್ವಭಾವ ಉಚ್ಚ ಹಾಗೂ ಮಧ್ಯಮ ವರ್ಗಕ್ಕೆ ಮಾತ್ರ. ಏಕೆಂದರೆ ಕೆಳವರ್ಗದ ಹೆಣ್ಣುಮಗಳಿಗೆ ಜೀವನದ ಭಾರ ಆಗಲೇ ಹೆಗಲ ಮೇಲೇರಿರುತ್ತದೆ. ಮನೆಯಲ್ಲಿ ತಾಯ್ತಂದೆಗಳು ಮಗಳನ್ನು ಅಲಂಕರಿಸುವಲ್ಲಿ ತೋರುವ ಉತ್ಸಾಹ, ಆಸಕ್ತಿಗಳನ್ನು ಅವಳ ಓದಿನಲ್ಲಿ ತೋರಿಸರು. ಹಾಗಾಗಿ ಈ ಬಡ ಬಾಲಿಕೆಯರು ತಮ್ಮ ಕನಸು, ಆಸೆಗಳನ್ನು ನನಸಾಗಿಸಿಕೊಳ್ಳಲು ಭಯವಿಲ್ಲದೆ ಸ್ವತಂತ್ರ ಬದುಕನ್ನು ವಿದ್ಯೆಯಿಲ್ಲದ ಕಾರಣದಿಂದಾಗಿ ಕಳೆದುಕೊಳ್ಳುತ್ತಿದ್ದಾರೆ. ಮಾಧ್ಯಮಗಳ ಈ ಧೋರಣೆಯಿಂದಲೇ ಬಂಡವಾಳ ಶಾಹಿಗಳ ಕಾಸ್ಮೆಟಿಕ್ಸ್, ಬಟ್ಟೆ ಗಿರಣಿಗಳು ಲಾಭದಾಯಕವೆನಿಸುವ ಹಳೇ ಮೌಲ್ಯಗಳನ್ನು ಮತ್ತೆ ಮತ್ತೆ ಹಿಡಿಯುವುದರೊಂದಿಗೆ ಜೀವಂತವಾಗಿರುವಂತೆ ಮಾಡಿವೆ.

ಪಶ್ಚಿಮ ದೇಶಗಳಲ್ಲಿ ಬಹುಲಾಭದ ಉದ್ದಿಮೆ ಎಂದು ಅಶ್ಲೀಲ ಸಾಹಿತ್ಯವನ್ನು (ಬಾಲ್ಯಕ್ಕೆ ಸಂಬಂಧಿಸಿದ) ಪರಿಗಣಿಸಲಾಗಿದೆ. ಪಶ್ಚಿಮದ ಎಲ್ಲವನ್ನೂ ಬಹುಕಾತುರದಿಂದ ನಮ್ಮದಾಗಿಸಿಕೊಳ್ಳುವ

ಹಂಬಲ ನಮ್ಮಲ್ಲಿರುವುದರಿಂದ ಈ "ಸಂಪತ್ತು" ನಮ್ಮ ದೇಶಕ್ಕೆ ಕಾಲಿಡಲು ಹೆಚ್ಚು ದೂರವಿಲ್ಲ. ಹೆಂಗಸರಿಗೆ ಸಮಾನತೆ ನೀಡುವಲ್ಲಿ ತೋರುವ ಮಡಿವಂತಿಕೆ ಇಲ್ಲಿ ಅಡ್ಡಬರುವುದಿಲ್ಲ. ಈಗಾಗಲೇ ಮಾರಾಟದ ವಸ್ತುವಾಗಿರುವ ಎಳೆ ಬಾಲಕಿಯರು ಇನ್ನೂ ಅದೆಷ್ಟು ಕಷ್ಟಗಳನ್ನು ಅನುಭವಿಸಿ ತಮ್ಮ ಉಳಿವಿಗಾಗಿ ಹೋರಾಡಬೇಕೋ? ಇದರೊಂದಿಗೆ ಸಮೂಹ ಮಾಧ್ಯಮಗಳೂ "ಮನರಂಜನೆ"ಯ ಸೋಗಿನಲ್ಲಿ ಸ್ತ್ರೀಯರ ಮೇಲೆ ನಡೆವ ಹಿಂಸೆ, ದೌರ್ಜನ್ಯ, ಹಲ್ಲೆಗಳನ್ನು ಹೆಚ್ಚಾಗಿ ಪ್ರದರ್ಶಿಸುತ್ತವೆ. ಇವು ಜನರ ನಡವಳಿಕೆ, ಮನೋಭಾವದ ಮೇಲೆ ಬೀರುವ ಪ್ರಭಾವ ಕಡೆಗಣಿಸುವಂಥದಲ್ಲ. ಹೆಣ್ಣಿನ ವ್ಯಕ್ತಿತ್ವಕ್ಕೆ ಮಸಿಬಳಿಯುವುದರೊಂದಿಗೆ ತೆರೆಯ ಮೇಲಿನ ಕ್ರೂರ ನಡವಳಿಕೆಗಳು, ರಸ್ತೆಗಿಳಿದು ಅಲ್ಲಿಂದ ಮನೆಬಾಗಿಲನ್ನೂ ತೆರೆದು ಮನೆಯೊಳಗೆ ಧಾಳಿಯಿಡುತ್ತಿವೆ. ಆದ್ದರಿಂದಲೇ ಮಹಿಳೆಯರ ಮೇಲಿನ ದೌರ್ಜನ್ಯದ ಪ್ರಕರಣಗಳು "ಬೆಲೆಯೇರಿಕೆ"ಯಂತೆ ಕೈಗೆ ಸಿಗದೆ ಏರುತ್ತಿದೆ. ಬಾಲಕಿಯರ ಆರೋಗ್ಯಯುತ ಮಾನಸಿಕ, ದೈಹಿಕ ಬೆಳವಣಿಗೆಗೆ ಗಮನ ಹರಿಸುವುದೇ ಇಲ್ಲ ಎನ್ನಬಹುದು. ಇಲ್ಲಿ ಇನ್ನೊಂದು ವಿಚಾರವನ್ನು ಹೇಳಲೇಬೇಕು. ಇತ್ತೀಚೆಗೆ ಮಂಡಲ್ ವರದಿಯ ಪರ-ವಿರೋಧದ ಅಲೆ ಎದ್ದಿತಷ್ಟೆ. ಇದಕ್ಕೆ ಪತ್ರಿಕೆಗಳು ಕೊಟ್ಟ ಪ್ರಚಾರವೇ ಹೆಚ್ಚಿನ ಸಾವು, ನೋವಿಗೆ ಕಾರಣ ಎಂಬುದು ಬಹುಜನರ ಅಭಿಪ್ರಾಯ. ವಿದ್ಯಾರ್ಥಿನಿಯೊಬ್ಬಳು ಆತ್ಮಸಮರ್ಪಣೆ ಮಾಡಿಕೊಳ್ಳುವ ಸಲುವಾಗಿ ಬೆಂಕಿ ಹಚ್ಚಿಕೊಂಡು ಸಾವು-ಬದುಕಿನ ನಡುವೆ ತೂಗುಯ್ಯಾಲೆ ಆಡುತ್ತಿರುವಾಗ ಅವಳು ತನ್ನ ಹೆತ್ತವರನ್ನು ಕೇಳಿದ ಪ್ರಶ್ನೆ —"ನನ್ನ ಫೋಟೋ ಪೇಪರಿನಲ್ಲಿ ಬಂದಿದೆಯೇ?" ಎಂದು. ಪತ್ರಿಕೆಗಳು ಯಾವ ರೀತಿಯ ಧ್ಯೇಯ, ಧೋರಣೆಗಳನ್ನು ಬೆಳೆಸಿಕೊಂಡಿವೆ, ಸಮಾಜದ ಆಗುಹೋಗುಗಳನ್ನು ಹೇಗೆ ಚಿತ್ರಿಸುತ್ತಿವೆ, ಯಾವುದಕ್ಕೆ ಪ್ರಚಾರ ನೀಡಬೇಕು, ಜನರ ಮನಸ್ಸನ್ನು ಹೇಗೆ ಆರೋಗ್ಯಕರ ಆಲೋಚನೆಗಳೆಡೆಗೆ ಒಯ್ಯಬೇಕು ಎಂಬುದರ ಬಗ್ಗೆ ಮತ್ತೆ ಮತ್ತೆ ಚಿಂತಿಸುವಂತಾಗಿದೆ.

**ಸಮೂಹ ಮಾಧ್ಯಮಗಳು ಕಾರ್ಯ ನಿರ್ವಹಿಸುವಾಗ ಅನುಸರಿಸಬೇಕಾದ ಸೂಚನೆಗಳು:**

ಪ್ರಥಮಕ್ಕೆ ತಲತಲಾಂತರದಿಂದ ಬೇರೂರಿರುವ ಮೂಢನಂಬಿಕೆ. ಆಚರಣೆಗಳಲ್ಲಿ ಸುಧಾರಣೆ ತರಲು ಯತ್ನಿಸಬೇಕು. ನಾವು ಆಚರಿಸುವ ಸಂಪ್ರದಾಯಗಳಿಗೆ ವೈಜ್ಞಾನಿಕ ಅರ್ಥವಿದೆಯೆ ಎಂದು ವಿಮರ್ಶಿಸಿ, ನಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. "ಧರ್ಮ" ತುಂಬ ಸೂಕ್ಷ್ಮದ ವಿಚಾರವಾದ್ದರಿಂದ ಎಲ್ಲವನ್ನೂ ಒಮ್ಮೆಗೇ ತರುವುದಾಗಲಿ. ಬೆಳಗಾಗುವುದರಲ್ಲಿ ಎಲ್ಲವನ್ನೂ ಸರಿಪಡಿಸುತ್ತೇವೆ ಎಂಬುದಾಗಲಿ ಕನಸಿನ ಮಾತು. ಆದ್ದರಿಂದ ನಿಧಾನವಾಗಿಯಾದರೂ ಧಾರ್ಮಿಕ ಗ್ರಂಥಗಳಲ್ಲಿ, ಪೌರಾಣಿಕ ಸಾಹಿತ್ಯಗಳಲ್ಲಿ

---

ಬಾಲಕಿಯರ, ಸ್ತ್ರೀಯರ ಮೇಲೆ ನಡೆಸಿದ ಅಧ್ಯಯನಗಳೆಲ್ಲವೂ ಎಲ್ಲರ ಅರಿವಿಗೆ ಬರುವಂತೆ ಮಾಡುವುದು ಆದ್ಯ ಕರ್ತವ್ಯ. ಇದರಿಂದ 'ಸ್ತ್ರೀ ಶಕ್ತಿ'ಯ ಬೆಲೆ ಜನಕ್ಕೆ ಗೊತ್ತಾಗುತ್ತದೆ. ರಾಷ್ಟ್ರದ ಪ್ರಗತಿಗೆ ಅವಳು ಹೇಗೆ ತನ್ನ ಬೆವರು, ರಕ್ತ ಹರಿಸಿ ತನ್ನ ಋಣ ತೀರಿಸುತ್ತಾಳೆ; ಅವಳು ಮಾಡಲಾಗದಂಥ ಕೆಲಸಗಳು ಯಾವುದು ಇಲ್ಲ, ಎಂಬ ನಿಚ್ಚಳ ಸತ್ಯ. ಸಾರ್ವಜನಿಕರಿಗೆ ತಿಳಿಯಬೇಕು.

---

ಬರುವ ಸ್ತ್ರೀಯರಿಗೇ ಹೆಚ್ಚು ಪ್ರಾಧಾನ್ಯತೆ ಕೊಟ್ಟು, ಜನರ ಗಮನ ಅವರೆಡೆ ಸೆಳೆಯಬೇಕು. ಹೆಂಗಸರೂ ನಮ್ಮಂತೆ, ಸಮಾನರು, ಕೀಳಲ್ಲ ಎಂಬ ಭಾವನೆ ಬರುವಂತೆ ಮಾಡಬೇಕು. ಪ್ರಸ್ತುತ ಕಾಲಕ್ಕೆ ತಕ್ಕಂತೆ ಧರ್ಮಾಚರಣೆಗಳನ್ನು, ಸಂಪ್ರದಾಯಗಳನ್ನು ಮಾರ್ಪಡಿಸಿ ಪ್ರಚಾರ ನೀಡಬೇಕು.

ನಾಣ್ಣುಡಿಗಳಲ್ಲಿ ಸ್ತ್ರೀಯರನ್ನ ಹೀಗಳೆವ, ದೂರುವ ಪದಗಳನ್ನು ತೆಗೆದು ಸುಧಾರಿಸಬೇಕು. ಏಕೆಂದರೆ ಈ ಗಾದೆಗಳು ಪರಿಸರ ಭೇದವಿಲ್ಲದೆ ಎಲ್ಲರಿಂದಲೂ ಬಳಕೆಯಾಗುತ್ತವಾದ್ದರಿಂದ ಇವುಗಳ ಪ್ರಭಾವ ತೆಗೆದುಹಾಕುವಂತಿಲ್ಲ. ಉದಾ: ಒಳ್ಳೆಯ ಮನೆತನವನ್ನು ಹಾಳುಗೆಡವಲು ಒಂದು ಹೆಣ್ಣು ಸಾಕು, ಪ್ರೀತಿಗೆ ಮಗಳು, ಆಸ್ತಿಗೆ ಮಗ, ಕಲ್ಲಾಗಿದ್ದರೂ ಗಂಡ ಗಂಡನೇ, ಹುಲ್ಲಾಗಿದ್ದರೂ ಗಂಡನೇ ಇಂಥವುಗಳನ್ನು ಮನೆತನದ ಪ್ರಗತಿಗೆ ಒಬ್ಬ ವಿದ್ಯಾವಂತ

ಹೆಣ್ಣಾ ಸಾಕು, ಪ್ರೀತಿಗೆ, ಆಸ್ತಿಗೆ ಎರಡಕ್ಕೂ ಮಗ, ಮಗಳು ಇಬ್ಬರೂ ಹಕ್ಕುದ್ದಾರರೆ, ಕಲ್ಲಿನಂತಿರುವವನು ಗಂಡನಾಗಲಾರ, ಹೆಣ್ಣಿಗೆ ಕಣ್ಣಿನಂತಿರುವವನು ಮಾತ್ರ ಗಂಡನಾಗಬಲ್ಲ............ಇತ್ಯಾದಿಯಾಗಿ ಮಾರ್ಪಡಿಸಿದರೆ ಜನರ ಮನದ ಮೇಲಾಗುವ ಪರಿಣಾಮ ಗಮನೀಯವಾಗಿರುತ್ತದೆ. ದಶಕಗಳ ಹಿಂದೆಯೇ ಭಾರತಿಯಾರ್ ಅಂತಹ ಕವಿಗಳು ತಮ್ಮ ಕವನಗಳಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ವಿದ್ಯೆ ಸಮಾನ ಆಸ್ತಿಯೆಂದು ಸಾರಿದ್ದಾರಷ್ಟೇ. ಅದನ್ನು ಕಾರ್ಯರೂಪಕ್ಕೆ ತರುವುದು ಮುಖ್ಯ.



ರಾಷ್ಟ್ರೀಯ ವಾಹಿನಿಯಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನರೆಂದು ಅರಿವು ಮೂಡಿಸಬೇಕು, ಮನೆಯ ಒಳಗೆ ಹೊರಗೆ ದುಡಿವ ಸ್ತ್ರೀಗೆ ನ್ಯಾಯ ದೊರೆಯಬೇಕು. ಅವರ ಮನದಲ್ಲಡಗಿರುವ ಕೀಳರಿಮೆ, ಪರಾವಲಂಬಿತನಗಳನ್ನು ಹೊಡೆದೋಡಿಸಿ, ಆತ್ಮವಿಶ್ವಾಸ, ತೀರ್ಮಾನ ತೆಗೆದುಕೊಳ್ಳುವ, ನಾಯಕತ್ವ ವಹಿಸಿಕೊಳ್ಳಲು ಮುಂದಾಗುವ ಗುಣಗಳು ಬೆಳೆಯಲು ಸಹಾಯವಾಗುವಂಥ ಕಾರ್ಯಕ್ರಮಗಳನ್ನು, ಸಾಹಿತ್ಯಗಳನ್ನು ರೂಪಿಸಬೇಕು, ರಚಿಸಬೇಕು, ಸ್ತ್ರೀ-ಪುರುಷರಿಬ್ಬರಿಗೂ ಅನ್ವಯವಾಗುವಂತೆ ಶಬ್ದಕೋಶದಲ್ಲಿನ ಕೆಲ ಪದಗಳನ್ನು ಬದಲಿಸಬೇಕು (ಉದಾ: ಮ್ಯಾನ್‌ಹುಡ್ — ಅಡಲ್ಟ್‌ಹುಡ್; ಮ್ಯಾನ್‌ಪವರ್ — ವರ್ಕ್‌ಪವರ್.... ಇತ್ಯಾದಿಯಾಗಿ ಭೇದವಿಲ್ಲದಂತೆ). ಸ್ತ್ರೀಯರು ಸುಲಭವಾಗಿ ದೌರ್ಜನ್ಯಗಳಿಗೆ ಪಕ್ಕಾಗುವರೆಂದು ನಿರೂಪಿಸುವ ದೃಶ್ಯಗಳನ್ನು, ಕಥೆಗಳನ್ನು ಸಂಪೂರ್ಣವಾಗಿ ನಿಷೇಧಿಸುವತ್ತ ನಮ್ಮ ಯತ್ನ ಸಾಗಬೇಕು. ಧಾರ್ಮಿಕತೆಯೊಂದಿಗೆ ಪ್ರತಿಯೊಂದು ಮಾಧ್ಯಮದ ಕಾರ್ಯಕ್ರಮಗಳನ್ನು ವಿವೇಚಿಸುವ ಶಕ್ತಿಯನ್ನು ಮಕ್ಕಳಲ್ಲಿ ಬೆಳೆಸಬೇಕು, ಅಸಂಗತ ಸಂಗತಿಗಳೂ ಇರಬಹುದೆಂಬ ಭಾವನೆ ಅವರ ಮನದಲ್ಲಿ ಬೆಳೆಯುವಂತೆ ಮಾಡಬೇಕು, ಹಾಗೇ ಸ್ತ್ರೀಯರಿಗೆ ಮಾರಕವಾಗುವಂಥ ದೃಶ್ಯಗಳನ್ನು, ಮಾದರಿಗಳನ್ನು ತೋರಿಸಿದರೆ ಮುಲಾಜಿಲ್ಲದೆ ಪ್ರತಿಭಟಿಸಿ, ಲಿಂಗಭೇದಕ್ಕೆ ಒತ್ತುಕೊಡುವಂಥ ವಿಷಯಗಳನ್ನು ಜಾರಿಗೆ ತಾರದಂತೆ ಸರ್ಕಾರದ ಮೇಲೆ ಒತ್ತಡ ಹಾಕಬೇಕು.

ಬಾಲಕಿಯರ, ಸ್ತ್ರೀಯರ ಮೇಲೆ ನಡೆಸಿದ ಅಧ್ಯಯನಗಳೆಲ್ಲವೂ ಎಲ್ಲರ ಅರಿವಿಗೆ ಬರುವಂತೆ ಮಾಡುವುದು ಆತ್ಯಗತ್ಯ. ಇದರಿಂದ "ಸ್ತ್ರೀ ಶಕ್ತಿ" ಯ ಬೆಲೆ ಜನಕ್ಕೆ ಗೊತ್ತಾಗುತ್ತದೆ, ರಾಷ್ಟ್ರದ ಪ್ರಗತಿಗೆ ಅವಳು ಹೇಗೆ ತನ್ನ ಬೆವರು, ರಕ್ತ ಹರಿಸಿ ತನ್ನ ಋಣ ತೀರಿಸುತ್ತಾಳೆ, ಅವಳು ಮಾಡಲಾಗದಂಥ ಕೆಲಸಗಳು ಯಾವುದೂ ಇಲ್ಲ ಎಂಬ ನಿಚ್ಚಳ ಸತ್ಯ ಸಾರ್ವಜನಿಕರಿಗೆ ತಿಳಿಯಬೇಕು, ಸ್ತ್ರೀಯರ ಪರವಾಗಿರುವ ನಾಟಕ, ಹಾಡುಗಳನ್ನು, ಘೋಷಣೆಗಳನ್ನು ರಚಿಸಬೇಕು, ಸ್ತ್ರೀ-ಪರವಾಗಿರುವ ಸಾಹಿತ್ಯ, ಚಲನಚಿತ್ರ, ನಾಟಕಗಳಿಗೆ ವ್ಯಾಪಕ ಪ್ರಚಾರ ನೀಡುವ ಕಾರ್ಯವನ್ನು ಮಾಡಬೇಕು. ಮಹಿಳೆಯರ, ಬಾಲಕಿಯರ ಅಭಿವೃದ್ಧಿಗೆ ಅಡ್ಡಿಯಾಗುವಂಥ ಬರವಣಿಗೆಗಳು ಪ್ರಕಟವಾಗದಂತೆ ಸಂಪಾದಕರುಗಳ ಮೇಲೆ, ವಿದ್ಯಾ ಇಲಾಖೆಗಳ ಮೇಲೆ ಒತ್ತಡ ತರಬೇಕು.

ಶಾಲೆಗಳಲ್ಲಿ ದೈಹಿಕ ಶಿಕ್ಷಣಕ್ಕೆಂದು ನೀಡಲಾಗುವ ಧನವನ್ನು ಹುಡುಗ-ಹುಡುಗಿಯರಿಬ್ಬರಿಗೂ ಸಮಾನವಾಗಿ ಹಂಚಬೇಕು. ಪ್ರತಿಯೊಂದು ಬಗೆಯ ವಿದ್ಯಾಭ್ಯಾಸ ಅಥವಾ ಅಧ್ಯಯನದಲ್ಲೂ ಸ್ತ್ರೀಯರಿಗೆ ಶೇ 30 ರಷ್ಟು ಸ್ಥಾನಗಳನ್ನು ಮೀಸಲಿಟ್ಟರೆ, ಶಿಕ್ಷಣದಿಂದ ಔದ್ಯೋಗಿಕ ಕ್ಷೇತ್ರದಲ್ಲಿರುವ ಸ್ತ್ರೀ-ಪುರುಷ ಅಸಮಾನತೆಯನ್ನು ಹೋಗಲಾಡಿಸಬಹುದು. ಶಿಕ್ಷಕರು ಶಿಕ್ಷಣದ ಹಾಗೂ ಇತರ ಚಟುವಟಿಕೆಗಳ ಯಾವ ಹಂತದಲ್ಲೂ ಲಿಂಗಭೇದ ಮಾಡಬಾರದು. ಗ್ರಂಥಾಲಯಗಳಿಗೆ ಪುಸ್ತಕಗಳನ್ನು ಆರಿಸುವಾಗ ಅದಷ್ಟು ಗಮನಹರಿಸಬೇಕು, ಜೀವನದ ಬಗ್ಗೆ ಭ್ರಾಮಕ ಕಲ್ಪನೆಗಳನ್ನಿಟ್ಟು

32ನೇ ಪುಟ ನೋಡಿ.

# ಬಯಲು.

ಇವೆರಡೂ ಮನೆಗಳ ನಡುವೆ ತೆರೆದ ಬಯಲಿತ್ತು

ಇಲ್ಲೇ ನಾವು ಚೆನ್ನಮಣೆ ಪಗಡೆಯಾಡಿದ್ದು
ಮೊಗ್ಗಿನ ಜಡೆಯ ಭಾರದಲ್ಲಿ ತಲೆತಗ್ಗಿಸಿದ್ದು
ಮೊದಲ ಮುಟ್ಟಿನ ಹೇಸಿಗೆಯಲ್ಲಿ ಮೂಲೆಸೇರಿದ್ದು.
ಹೊಸದಾಗಿ ಬ್ರಾ ಧರಿಸಿ ಸಂಕೋಚದ ಮುದ್ದೆ
ಯಾಗಿದ್ದು.



ಇದೇ ಕಿಟಕಿಯಲ್ಲಿಣಕಿ ವರನ ಕದ್ದು ನೋಡಿದ್ದು
ಚೊಚ್ಚಲ ಹೆರಿಗೆಯಲ್ಲಿ ಬಟ್ಟೆ ಒಗೆದದ್ದು
ಪುಟ್ಟ ಜುಟ್ಟಿಗೆ ಮಲ್ಲಿಗೆ ಬೇಡವೆಂದು ಮಗಳು
ನಿರಾಕರಿಸಿದಾಗ ನೊಂದದ್ದು
ಮಗನ ಕ್ರಿಕೆಟ್ ಆಟಕ್ಕೆ ವಿಕೆಟ್ಟಾಗಿ ನಿಂತದ್ದು.

ಇದ್ದಕ್ಕಿದ್ದಂತೆ ಇಲ್ಲೊಂದು ಕಟ್ಟಡ ಕಟ್ಟೇಬಿಟ್ಟರು
ಸರಸರನೆ ಇಟ್ಟಿಗೆ ಮೇಲೊಂದಿಟ್ಟಿಗೆ ಇಟ್ಟು
ಈಗ ನಡುವೆ ಬಯಲಿಲ್ಲ ತೆರವಿಲ್ಲ.

ಮೊಗ್ಗಿನ ಜಡೆಯ ಹುಡುಗಿ
ಬಳೆ ತಿರುಗಿಸುತ್ತಾ ಬಂದಾಗ
ಗೋಲಿ ಬಿಸಾಡಿದ ಹುಡುಗನೆಂದು

ಈಗ ಬಂದೆಯಾ ಹುಡುಗಿ
ಕಾದಿದ್ದೆ ನಿನಗಾಗಿ.

ಪ್ರತಿಭಾ ನಂದಕುಮಾರ್.

# ಗೋಯಿಂದಿ

ಉತ್ತನೂರು ರಾಜಮ್ಮ ವಿ. ಶೆಟ್ಟಿ

ಒಂದು ವಿಧವಾದ ವಿಚಿತ್ರ ಪರಿಸ್ಥಿತಿಗಳು ಅದರ ಮೇಲು ಬೀಳುಗಳ ಬಗ್ಗೆ ಯೋಚಿಸುವಾಗ ಪರಿಚಯದ ಪರಿಸರದ ಕೆಲವಾರು ವ್ಯಕ್ತಿಗಳು ಎಷ್ಟೇ ಅವಿದ್ಯಾವಂತರಿರಲಿ ಸಂಕಷ್ಟಗಳನ್ನು ಸೆಣಸುತ್ತಾ ಎದುರಿಸುತ್ತಾರೆ. ಎಂಬುದಕ್ಕೆ ಗೋವಿಂದಮ್ಮನಂತ ವೃದ್ಧೆಯರು ನೆನಪಿಗೆ ಬರುತ್ತಾರೆ.

ಪಾತೆಮ್ಮಗೆ(ಅಜ್ಜಿ) ಮೈಹುಷಾರಿಲ್ಲವೆಂದು ನೋಡಿ ಬರಲು ಹಳ್ಳಿಗೆ ಹೊರಟಿದ್ದೆ. ಕೋಲಾರದ ಬಸ್ ಸ್ಟ್ಯಾಂಡ್‌ನಲ್ಲಿ ಬಸ್‌ಗಾಗಿ ಕಾದುನಿಂತಿದ್ದಾಗ ರಾಜಕ್ಕಾ ರಾಜಕ್ಕೋ ಎಂಬುವ ಪರಿಚಯದ ದನಿ ಕೇಳಿ ಹಿಂತಿರುಗಿ ನೋಡಿದೆ. ಗೋಣಿ ಚೀಲಕ್ಕೆ ತರಕಾರಿ ತುಂಬಿ ಹಗ್ಗದ ಹುರಿಯಿಂದ ಮೂಟೆ ಬಿಗಿಯುತ್ತಾ ನನ್ನನ್ನು ಕೂಗಿ ಕರೆದಿದ್ದಳು ಗೋಯಿಂದಮ್ಮ "ಏನೇ ಅಮ್ಮಯ್ಯ ಚೆನ್ನಾಗಿದ್ದೀಯಾ" ಎಂದೆ. "ಏಸ್ ಸೆಂದವ್ರೋ ಬುಡಕ್ಕ ನನ್ನಂತ ಪರದೇಶಿಗ್ಳು ಯಾಕ್ ಬದುಕ್‌ಬ್ಯಾಕ್ ಏಳು" ಎಂದಳು. ಅವಳಿಡೀ ವ್ಯಥೆಯ ಬದುಕನ್ನು ಅವಳ ಮುಖ ಸಂಗ್ರಹಿಸಿಟ್ಟಂತೆ ಕಂಡಿತು. ಕೋಲಾರಕ್ಕೆ ಹತ್ತು ಮೈಲಿ ದೂರದ ಕುಗ್ರಾಮ ಒಲ್ಲಂಬಳ್ಳಿಯ ಗಾಣದ ರಾಮಪ್ಪನ ಮಗಳು ಗೋಯಿಂದಿ. ಬತ್ತಿಹೋದ ಕೆನ್ನೆ. ಗುಣಿಬಿದ್ದ ಕಣ್ಣು, ಮೂಳೆ ಎತ್ತಿ ಕಾಣುವ ಕೊರಳು. ಪಾಪ ಮೂವತ್ತು ವರುಷಕ್ಕೆಲ್ಲಾ ಐವತ್ತು ವರುಷದ ಮುದುಕಿಯಂತೆ ಬಡವಾಗಿ ಕಾಣುತ್ತಿದ್ದಳು, ಅವಳನ್ನು ಕಂಡು ಕರುಳು ಚುರಕ್ ಅಂದಿತು. ಹಾಗೆಯೇ ದಿಟ್ಟವಾಗಿ ಬದುಕನ್ನು ಎದುರಿಸುತ್ತಿದ್ದ ಅವಳ ಬಗ್ಗೆ ಅಬ್ಬಾ! ಎನಿಸಿತು ಕೂಡ. ಬಸ್ ಹತ್ತಿದ ಸಮಯದಿಂದ ಹಳ್ಳಿ ಬೌಂಡ್ರಿಯಲ್ಲಿಳಿಯುವವರೆಗೆ ತನ್ನೆಲ್ಲಾ ಗೋಳು, ಕಷ್ಟ ಸುಖದ ಕಥೆ ಹೇಳುತ್ತಾ ಬಂದಳು ಗೋಯಿಂದಿ.

ತಾನು ಚಿಕ್ಕಂದಿನಲ್ಲಿ ತಂದೆ ಕೈಗಾಣ ಆಡುತ್ತಿದ್ದಾಗ, ಎಣ್ಣೆ ಮಾರಲು ಅಜ್ಜಿಯ ಜೊತೆಗೆ ತಾನೂ ಸಣ್ಣದೊಂದು ಎಣ್ಣೆ ಗಂಪೆ ಹೊತ್ತು ಸುತ್ತಲ ಹಳ್ಳಿಗಳೆಲ್ಲಾ ತಿರುಗಿ ಎಣ್ಣೆ ವ್ಯಾಪಾರ ಕಲಿತಿದ್ದ ಅವಳಿಗೆ ವಯಸಿಗೆ ಬಂದ ಹೆಣ್ಣಾಗಿ ಮದುವೆ, ಮಗು ಜೊತೆಗೆ ವಿಧವೆಪಟ್ಟ ಎಲ್ಲವೂ ಜೊತೆ ಜೊತೆಯಲ್ಲೇ ಒದಗಿಬಂದು ಬದುಕೆನ್ನುವ ಭೀಕರ ಸಮುದ್ರ ಎದುರಾಯಿತು.

ಮೊದಲಿಗಾದರೆ, ತಾವೇ ಸ್ವತಃ ಕುಟುಂಬದ ಮಂದಿಯಲ್ಲಾ ಕೈಗಾಣದ ವೃತ್ತಿಯಲ್ಲಿ ಶ್ರಮಿಸಿ ಸುಲಭದ ಬೆಲೆಯಲ್ಲಿ ಸಿಗುತ್ತಿದ್ದ ಎಣ್ಣೆಗಾಳುಗಳನ್ನು ಒಟ್ಟುಗೂಡಿಸಿ, ಒಣಗಿಸಿ ಕಲ್ಲುಂಗಾಣಕ್ಕೆ ಸುರಿದ್ದು ಗಾಣಕ್ಕೆ ಎತ್ತು ಕಟ್ಟಿ ರಾತ್ರಿ ಸರಿಹೊತ್ತಿನಿಂದ ಬೆಳುಗು ಹೊತ್ತು ಮೂಡವವರೆಗೆ ಘೊಯ್ಞೋ.......ಎನ್ನುವ ಶಬ್ದದೊಂದಿಗೆ, ಸಳಸಳ ಎಣ್ಣೆ ಊರುವ ಗಾಣದಿಂದ ಶ್ರಮಕ್ಕೆ ತಕ್ಕ ಪ್ರತಿಫಲದಿಂದ ಕುಟುಂಬದ ಎಲ್ಲ ಜನರ ಜೀವನ ಜರುಗುತ್ತಿತ್ತು. ಆದರೆ, ಈಗಿನ ಪರಿಸ್ಥಿತಿ ಹಾಗಲ್ಲ. ಎಣ್ಣೆ ಆಡುತ್ತಿದ್ದ ಕೈಗಾಣಗಳೆಲ್ಲ ಮೂಲೆ ಗುಂಪಾಗಿಸಿ, ರಾಕಾಶಿಯಂತ ಎಣ್ಣೆ ಎಕ್ಸ್‌ಫಿಲ್ಲರ್‌ಗಳು ವಕ್ರಿಸಿದೆ. ರೆಟ್ಟೆ ಬಲಿಮೆಯಿಂದ ಎಣ್ಣೆ ಹಿಂಡಿ, ಮಾರಿ ಜೀವಿಸುತ್ತಿದ್ದ ಸಾವಿರಾರು ಮಂದಿ ಬಡಹಳ್ಳಿಗರಂತೆ ತನ್ನ ತಂದೆಯ ತಾಖತ್ತು ಕುಸಿದಿದೆ.

ಪೇಟೆಯಿಂದ ಕೊಂಡು ತರುವ ಎಣ್ಣೆಡಬ್ಬ ಸಾರಿಸಿದ ಬಿದಿರು ಗಂಪೆಯಲ್ಲಿ ಹೊತ್ತು ಹಳ್ಳಿ-ಹಳ್ಳಿ ತಿರುಗಿ ದಿನದ ಗಂಜಿಗೆ ಸಂಪಾದಿಸಲು ಕಷ್ಟವಾಗಿರುವ ಆಕೆಯ ತಂದೆ ತಾಯಿಗೆ ಹೊಟ್ಟೆ ತುಂಬಾ ಮಕ್ಕಳು. ಮೊದಲನೆಯವಳೇ ಅದ ಗೋಯಿಂದಿಯನ್ನು ಹೆಣ್ಣಿನ ಭಾರ ತಗ್ಗಿದರೇ ಸಾಕೆಂದು ಸುಲಭ ಖರ್ಚಿನ ಎರಡನೇ ಮದುವೆಗೆ ಮಾಡಿಕೊಟ್ಟಿದ್ದರು. ಗಂಡನಿಗೆ ಖಾಯಿಲೆ ಇದ್ದ ಕಾರಣ ಮದುವೆ ಆದ ನಾಲ್ಕೈದು ವರುಷಕ್ಕೆಲ್ಲ ಗಂಡ ಸತ್ತು ಮುಂಡೆ ಆಗಿದ್ದು ಆಯ್ತು. ಒಂದು ಗಂಡು ಮಗುವಿದ್ದ ಕಾರಣ ಹೇಗಾದರೂ ಚೂರು ಪಾರು ಆಸ್ತಿ ದೊರಕಬಹುದೆಂದು ಅತ್ತೆ ಮನೆಯಲ್ಲೇ ಕತ್ತೆಯಂತೆ ದುಡಿದು ಹೊಲ ಗದ್ದೆ ಸೇದ್ಯ ಮಾಡಿಕೊಂಡು ಏಗಿದಳು. ಆದರೆ ಮೈದುನ ವಾರಗಿತ್ತಿರ ಕಾಟ, ಅಸಾಧ್ಯವೆನ್ನುವ ಹೊಟ್ಟೆಬಟ್ಟೆಯ ಅನಾದರಣೆ ಆಗಿ ಮಗುವನ್ನು ಕಂಕುಳಲ್ಲಿ ಹೊತ್ತು ತೌರು ಸೇರಿ

ಬಿಟ್ಟಳು. ಇಲ್ಲಿಯೂ ಬಡತನದ ತಾಂಡವವೆ, ತೌರಿಗೆ ಭಾರವಾಗಬಾರದೆಂದು ನಡುವಿಗೆ ಬಟ್ಟೆ ಬಿಗಿದು ಕಟ್ಟಿ ಸ್ವಂತ ಶ್ರಮಕ್ಕೆ ಹೆಜ್ಜೆ ಇಟ್ಟಳು. ತಂದೆ ಕೊಟ್ಟ ಹತ್ತು ಹೆಜ್ಜೆ ಖಾಲಿ ಜಾಗದಲ್ಲಿ ಹುಲ್ಲಿನ ಒಪ್ಪಾರ ಹಾಕಿಕೊಂಡು ಬೇರೆಯೇ ಬೇಯಿಸಿಕೊಳ್ಳುತ್ತಾ ಎಳೆ ಮಗುವನ್ನು ತಾಯಿ ಮನೆಯಲ್ಲಿ ಬಿಟ್ಟು ಕೂಲಿ ನಾಲಿ ಮಾಡಿ ಜೀವನ ಮಾಡಿಕೊಳ್ಳುತ್ತಿದ್ದಳು. ಮಳೆ ಬೆಳೆ ಕಾಲದಲ್ಲಿ ಸರಿಯಾದರೆ ಅಷ್ಟಿಷ್ಟು ಕೂಲಿ ಸಿಗುತ್ತೇ ವರ್ಷಗಟ್ಲೆ ಮಳೆ ಬರದೆ ವರಪು(ಬರ) ಅಮರಿ ಕೊಂಡರೆ ಕೂಲೀನೂ ನಾಸ್ತಿ. ಹಳ್ಳಿ ಊರಿನ ಹತ್ತು ಜನ ಕೆಟ್ಟವರೇ ಇರುವುದಿಲ್ಲವಲ್ಲ. ಪಂಚಾಯ್ತಿ ಚೇರ್ಮನ್ ಹಿರೀ ಮನಸಿನ ಹೃದಯವಂತ, ಪಕ್ಕದ ಹಳ್ಳಿ ಸೆಕ್ರೆಟ್ರಿಗೆ ಹೇಳಿ ವಿಧವಾ ವೇತನ ಮಾಡಿಸಿ ಬದಿಕ್ಕೋ ಅಮ್ಮಯ್ಯ ಎಂದ. ಗೋಯಿಂದಿಗೆ ಸ್ವಲ್ಪ ಉಸಿರಾಡುವಂತಾಯ್ತು ಆದರೆ ಅಷ್ಟೇ ಸಾಕಾಗುವುದಿಲ್ಲ ಮಗ ದೊಡ್ಡವನಾದ, ಇಸ್ಕೂಲಿಗೆ ಸೇರಿಸಬೇಕು. ಅವನ ಬಟ್ಟೆ ಬರೆ, ಬುಕ್ಕು ಫೀಜು ಅವನಿಗೆ ಕೊರತೆ ಯಾಗದಂತೆ ಅವನನ್ನು ವಿದ್ಯಾವಂತನ್ನಾಗಿಸಿ ಒಂದು ಗೋರ್ಮೆಂಟ್ ಚೌಕರಿದಾರ ಮಾಡುವ ಬೃಹದ್ ಆಸೆ ಗೋಯಿಂದಿಗೆ ಅದಕ್ಕೆಂದೇ ಅಲ್ಪ-ಸ್ವಲ್ಪ ಬಂಡವಾಳ ಕೂಡಿಸಿ, ಕೋಲಾರ ಪೇಟೆಯ ಮಾರ್ಕೆಟ್ ಆಕ್ಷನ್‌ನಲ್ಲಿ ತರಕಾರಿಕೊಂಡು ಸುತ್ತಲ ಹತ್ತಾರು ಹಳ್ಳಿ ತಿರುಗಿ ಮಾರುತ್ತ ಬರುವ ಅಲ್ಪ ಲಾಭದಲ್ಲೇ ಮಗನಿಗೆ ಅಚ್ಚುಕಟ್ಟು ಊಟ, ಬಟ್ಟೆ, ಸ್ಲೇಟು, ಬುಕ್ಕು ಕೊಡಿಸಿ, ಸಂಜೆ ಸ್ಕೂಲು ಮೇಷ್ಟ್ರ ಹತ್ತಿರ ಮನೇ ಪಾಠಕ್ಕೂ ಕಳಿಸ್ತಾಳೆ.

ಅಂತೂ ಅನಿಸುವುದಿಷ್ಟು ದಿಟ್ಟವಾಗಿ ಜೀವನ ವನ್ನು ಎದುರಿಸಿ, ತನ್ನ ಆಶೋತ್ತರಗಳ ಏಕೈಕ ಬಿಂಬ ವಾದ ತನ್ನ ಮಗುವಿಗಾಗಿ, ಕಷ್ಟ ನಷ್ಟ ಅನುಭವಿ ಸಿಯೂ ಬದುಕನ್ನು ಒಂದು ಕರ್ತವ್ಯವಾಗಿಸಿಕೊಂಡ ಅವಿದ್ಯಾವಂತ ಮುಗ್ಧ ಹೆಣ್ಣಾದ ಗೋಯಿಂದಿಯ ಸ್ಥೈರ್ಯ, ದಿಟ್ಟತನ ಆಧುನಿಕ ಹೆಣ್ಣು ಮಕ್ಕಳಲ್ಲಿ ಕಾಣುವುದಿಲ್ಲವಲ್ಲ ಏಕೆ?

---

## ನಗಬಾರದೇನೆ?

ಬೆಳ್ಳಿಯಂತೆ ನಕ್ಕು
ಕುಂಕುಮದ ರಂಗು
ಕೆನ್ನೆಯಲಿ ತುಂಬಿಕೊಂಡಿದ್ದ
ನನ್ನುಡುಗಿಗೆ ಏನಾಗಿದೆ?

ಸಿಂಧೂರವಿಡಲು ತೆಗೆದ -
ನೇರಾದ ಬೈತಲೆ ಇಂದೇಕೆ
ಓರೆಕೋರೆಯಾಗಿ ಅಳುತಿದೆ
ನನ್ನುಡುಗಿ?

ಹುಟ್ಟಿನಷ್ಟೇ ನಿಖರವು ಸಾವು
ತೆರಳಲೇಬೇಕು, ತಿರುಗಿ
ಬಾರದ ಬಂದ ಹಾದಿಗೆ
ಅದಕ್ಯಾಕೆ ಕಡು ದುಃಖ ಹುಡುಗಿ?

ಸುಡಿಸಲು ದೇಹ ಸಿಗದಿರೆನಂತೆ?
ಆತ್ಮವಿರುವುದು ನಮ್ಮ ಜೊತೆಗೆ
ನೋವ ಮರೆತು ನಗಬಾರದೇನೆ
ನನ್ನುಡುಗಿ?

**ಗಿರಿಜಾ ಎನ್. ಬಾಳ್ಳುಪೇಟೆ**

# 1990 -- ಹೆಣ್ಣು ಶಿಶುವಿನ ವರ್ಷ

## –ಸಾರ್ಕ್ ದೇಶಗಳ ಘೋಷಣೆ

ಒಂದು ಪ್ರತಿಕ್ರಿಯೆ

೧೯೯೦ ರ ವರ್ಷವನ್ನು ಸಾರ್ಕ್ ದೇಶಗಳು ಹೆಣ್ಣು ಶಿಶುವಿನ ವರ್ಷವೆಂದು ಘೋಷಿಸಿ, ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಾಗಿ ತಿಳಿಸಿದ್ದು ಸರಿಯಷ್ಟೆ. ನಮ್ಮ ದೇಶದಲ್ಲೂ ಸಹ ಹೆಣ್ಣು ಶಿಶುವಿನ ವರ್ಷವನ್ನು ಆಚರಿಸಿ ೧೭೫ ಕೋಟಿ ರೂ.ಗಳನ್ನು ಮೀಸಲಾಗಿಡಲಾಗಿದೆಯೆಂದೂ, ಮಹಿಳೆಯರ ಮೇಲೆ ನಡೆಯುತ್ತಿರುವ ನಿರಂತರ ಶೋಷಣೆಯನ್ನು ಅಂತ್ಯಗೊಳಿಸಲು ಸ್ತ್ರೀಯರು ಆರ್ಥಿಕವಾಗಿ ಸ್ವಾತಂತ್ರ್ಯಗೊಳಿಸಲು ಅನುಕೂಲವಾಗುವಂತಹ ವಾತಾವರಣವನ್ನು ಸೃಷ್ಟಿಸಲು ಆದ್ಯತೆ ನೀಡುತ್ತದೆಂದೂ ಒಂದೆರಡು ತಿಂಗಳ ಹಿಂದೆ ಕೇಂದ್ರ ಸರ್ಕಾರವು ತಿಳಿಸಿರುವುದು ಸರಿಯಷ್ಟೆ. ೧೯೯೦ ಇಸವಿ ಮುಗಿಯಲು ಇನ್ನೂ ೨ ತಿಂಗಳು ಮಾತ್ರ ಇದೆ. ಇದುವರೆವಿಗೂ ಹೆಣ್ಣು ಭ್ರೂಣಹತ್ಯದ ಲಿಂಗ ಪರೀಕ್ಷಾ ವಿಧಾನದ ವಿರುದ್ಧ ಎಲ್ಲಾ ರಾಜ್ಯಗಳಿಗೂ ಎಲ್ಲರಿಗೂ ಅನ್ವಯಿಸುವಂತೆ ಏಕರೀತಿಯ ಕಟುನಿಟ್ಟಾದ ಕಾನೂನು ಇನ್ನೂ ಜಾರಿಗೆ ತಂದಿಲ್ಲ. ೧೯೮೮ರಲ್ಲಿ ರಾಷ್ಟ್ರದ ಇತಿಹಾಸದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಲಿಂಗ ಪರೀಕ್ಷಾ ವಿಧಾನವನ್ನು ಬಹಿಷ್ಕರಿಸಿ ಕಾನೂನನ್ನು ಮಹಾರಾಷ್ಟ್ರ ಸರ್ಕಾರ ಜಾರಿಗೆ ತಂದಿದೆ:

### ಮಹಾರಾಷ್ಟ್ರದಲ್ಲಿ ಜಾರಿಗೊಳಿಸಿರುವ ಕಾನೂನು:

ಲಿಂಗ ನಿರ್ಧಾರ ಪರೀಕ್ಷೆಯನ್ನು ಈ ಕೆಳಗೆ ಸೂಚಿಸಿರುವ ಕಾರಣಗಳಿಗೆ ಮಾತ್ರ ಪರೀಕ್ಷೆಗೆ ಒಳಪಡಿಸಿಕೊಳ್ಳಬಹುದು ಅವುಗಳು:

—35 ಕ್ಕಿಂತ ಹೆಚ್ಚು ವಯಸ್ಸಿನ ಮಹಿಳೆ ಬಸುರಿಯಾಗಿದ್ದರೆ,
—ಎರಡು ಅಥವಾ ಅದಕ್ಕಿಂತ ಹೆಚ್ಚು ಮಕ್ಕಳ ಗರ್ಭಪಾತವಾಗಿದ್ದರೆ ಅಥವಾ ಭ್ರೂಣನಷ್ಟವಾಗಿದ್ದರೆ.
—ವಿಕಾರ ಮಕ್ಕಳ ಜನನವಾಗಿದ್ದರೆ,
—ಅನುವಂಶಿಕ ಕಾಯಿಲೆಯಿದ್ದರೆ,
—ಕುಟುಂಬದಲ್ಲಿ ಯಾರಿಗಾದರೂ ಬುದ್ಧಿಭ್ರಮಣೆಯಾಗಿದ್ದರೆ,
—ಜೀವ ಕಣವು ತನ್ನ ಸಂತಾನಾಭಿವೃದ್ಧಿಗಾಗಿ ಒಡೆಯುವುದಕ್ಕೆ ಮೊದಲು ಅದರ ಆಧಾರ ಬಿಂದುವಿನಲ್ಲಿಯೇ ಅಸಮಾನತೆಯಿದ್ದರೆ,
—ಹುಟ್ಟು ಬಂದಲ್ಲಿನ ಅಸಮತೆಯಿದ್ದರೆ (ಕಾನ್‌ಜೆನ್ನೈಟಲ್ ಅನಾಮಲೀಸ್),
—ರಕ್ತಬಣ್ಣದ ಕೊರೆಗೆ ಸಂಬಂಧಿಸಿದ ಕಾಯಿಲೆ, (ಹಿಮೋಗ್ಲೋಬಿನೋಪೆಥೀಸ್),
—ಲೈಂಗಿಕ ಸಂಬಂಧದಿಂದ ಜನನಕ್ರಿಯೆಗೆ ಸಂಬಧಪಟ್ಟ ಕಾಯಿಲೆಗಳಿದ್ದರೆ,

ಈ ಮೇಲೆ ಸೂಚಿಸಿರುವ ಕಾಯಿಲೆ, ತೊಂದರೆಗಳಿದ್ದರೆ ಮಾತ್ರ ಭ್ರೂಣದ ಲಿಂಗನಿರ್ಧಾರಕ ಪರೀಕ್ಷೆ ಮಾಡಿಸಿಕೊಳ್ಳಬಹುದು. ಹಾಗೆಯೇ ಪರೀಕ್ಷೆ ಮಾಡಿಸಿಕೊಳ್ಳಬಯಸುವವರು ಬರವಣಿಗೆಯ ಮೂಲಕ ತಮ್ಮ ಒಪ್ಪಿಗೆಯನ್ನು ಸೂಚಿಸಬೇಕು. ಮೇಲಿನ ಕಾರಣಗಳಿಲ್ಲದೆಯೇ ಪರೀಕ್ಷೆ ನಡೆಸಿದ್ದೇ ಆದರೆ, ಪರೀಕ್ಷೆ ನಡೆಸಿದ ವೈದ್ಯರಿಗೆ 3 ವರ್ಷಗಳ ಕಾರಾಗೃಹವಾಸದೊಂದಿಗೆ ಒಂದು ಸಾವಿರ ರೂಪಾಯಿಗಳ ದಂಡ ತೆರಬೇಕು. ಹಾಗೆಯೇ ಅಂತಹ ಪರೀಕ್ಷೆಗೆ ಒಳಪಡಿಸಲು ಪ್ರಚೋದಿಸಿದ ಗಂಡ ಅಥವಾ ಮನೆಯವರು ಯಾರೇ ಆಗಿದ್ದರೂ ಅವರಿಗೂ ಶಿಕ್ಷೆಯಿದೆ. ಪರೀಕ್ಷೆ ನಡೆಸುವ ಆಸ್ಪತ್ರೆಗಳಲ್ಲಿ ಅಗತ್ಯವಾಗಿ ಇರಲೇಬೇಕಾಗಿರುವ ಪರಿಕರಗಳ ಪಟ್ಟಿಯನ್ನು ಸೂಚಿಸಿದೆ. ಜೊತೆಗೆ ಎಂತಹ ವ್ಯಕ್ತಿಗಳು ಪರೀಕ್ಷೆ ನಡೆಸಬೇಕೆಂಬುದನ್ನು ಸಹ ತಿಳಿಸಿದೆ.

ಈ ಕಾನೂನನ್ನು ಬಿಗಿಯಾಗಿ ಜಾರಿಗೆ ತರುವ ಉದ್ದೇಶದಿಂದ ಹಲವಾರು ಸಮಿತಿಗಳನ್ನು ಸಹ ಅಲ್ಲಿನ ಸರ್ಕಾರ ರಚಿಸಿದೆ. ಭಾರತದಲ್ಲಿ ಪ್ರತಿಯೊಂದು ರಾಜ್ಯದಲ್ಲೂ ಈ ಲಿಂಗ ಪರೀಕ್ಷಾ ವಿಧಾನದಿಂದಾಗಿ ಹೆಣ್ಣು ಭ್ರೂಣದ ಬರ್ಬರ ಹತ್ಯೆ ಹಾಡು ಹಗಲಿನಲ್ಲಿಯೇ ನಿರಂತರವಾಗಿ ಸಾಗಿದೆ. ಇದಕ್ಕೆ ತಂದೆ ತಾಯಿಗಳು ನೀಡುವ ಕಾರಣ, ಹೆಣ್ಣು ಮಗು ದೊಡ್ಡವಳಾಗಿ, ಆಕೆಯ ಮದುವೆಯಲ್ಲಿ ಲಕ್ಷಾನುಗಟ್ಟಳೆ ವರದಕ್ಷಿಣೆ ನೀಡುವ ಬದಲು, ಈಗಲೇ ವೈದ್ಯರಿಗೆ ೫೦೦೦ — ೧೦,೦೦೦ ರೂ.ಗಳವರೆಗೆ ನೀಡಲು ತಮ್ಮ ಅಭ್ಯಂತರವಿಲ್ಲವೆಂದು ತಿಳಿಸುತ್ತಾರೆ. ಈ ರೀತಿಯ ಮಾನಸಿಕ ಸಿದ್ಧತೆಯನ್ನು ತಂದೆ ತಾಯಿಗಳು ಮಾಡಿಕೊಳ್ಳಬೇಕಾದರೆ, ನಮ್ಮ ಸಮಾಜ ವ್ಯವಸ್ಥೆ ಯಾವ ಮಟ್ಟದಲ್ಲಿದೆ ಎಂಬುದನ್ನು ಬಿಂಬಿಸುತ್ತದೆ. ಸ್ತ್ರೀ ಪುರುಷರುಗಳ ಕೇಂದ್ರ ಬಿಂದುವಾಗಿ ಈ ಸಮಾಜ ಸಂಘಟನೆಯಾಗಿದೆ. ಇಂತಹ ಸಮಾಜದಲ್ಲಿ ಪ್ರತಿಯೊಬ್ಬರೂ ಬದುಕುವ ಹಕ್ಕುಳ್ಳವರಾಗಿದ್ದಾರೆ. ಹೀಗಿದ್ದರೂ ಶತಶತಮಾನಗಳಿಂದಲೂ ಹೆಣ್ಣು ಸಮಾಜದ ಎರಡನೆ ದರ್ಜೆಯವಳೆಂದೂ, ಆಕೆಯನ್ನು ಮೂಲೆಗೆತಳ್ಳಿದ್ದು. ಶೋಷಣೆಗೆ ಒಳಗಾಗಿ ಮೌನವಾಗಿಯೇ ಸ್ಪಂದಿಸುತ್ತಿದ್ದವಳು ಇಂದು ಶಿಕ್ಷಣದಿಂದಾಗಿ ಸಮಾನತೆಗಾಗಿ ಧೈರ್ಯವಾಗಿ ಪ್ರತಿಭಟಿಸುತ್ತಿದ್ದಾಳೆ. ಜಗತ್ತಿನ ಇತರ ದೇಶಗಳಲ್ಲಿ, ವಿಜ್ಞಾನದ ಮುನ್ನಡೆಯಿಂದಾಗಿ ೨೧ ರ ದಶಕದತ್ತ ನೋಡುತ್ತಿರುವಾಗ ನಮ್ಮ ದೇಶದಲ್ಲಿ ಈ ಕಾಲದಲ್ಲೂ ಒಂದು ಕಡೆ ಸತಿ ಪ್ರಕರಣಗಳು ಮರುಕಳಿಸುತ್ತಿರುವುವು. ಬೆತ್ತಲೆಸೇವೆ, ದೇವದಾಸಿಪದ್ಧತಿ, ಬಾಲ್ಯವಿವಾಹ ಹಾಗೂ ಮದ್ರಾಸಿನ ಕಲ್ಲರ್ ಜನಾಂಗದಲ್ಲಿ ಹೆಣ್ಣು ಮಗು ಹುಟ್ಟಿದ ನಂತರ ಕೊಲ್ಲುವಪದ್ಧತಿ, ಹೆಣ್ಣು ಭ್ರೂಣ ಹತ್ಯೆಯ ಘೋರ ನಿದರ್ಶನಗಳಿಂದ ನಾವೆಲ್ಲಿದ್ದೇವೆ ಎಂಬುದನ್ನು ಪ್ರಶ್ನಿಸಿಕೊಳ್ಳಲು ಎಡೆಮಾಡಿಕೊಟ್ಟಿವೆ. ಇವತ್ತು ನಮ್ಮ ಮುಂದೆ ಸಮಾನತೆಯ ಹೋರಾಟವಿಲ್ಲ ಅಸ್ತಿತ್ವದ ಪ್ರಶ್ನೆ ಕಾಡುತ್ತಿದೆ. ವರದಕ್ಷಿಣೆಯ ದಾಹದಿಂದ, ಹೆಣ್ಣುಗಳನ್ನು ಸುಡುತ್ತಿರುವುದನ್ನು ಪ್ರತಿದಿನವೂ ದೈನಂದಿನ ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ವರದಕ್ಷಿಣೆಯ ವಿರುದ್ಧ ಸರ್ಕಾರ ಮಾಡಿರುವ ಶಾಸನಗಳು ಕೇವಲ ಹೊತ್ತಿಗೆಯ ಪುಟ್ಟಿನ ಒಳಗೆ ಬೆಚ್ಚಗೆ ಮಲಗಿವೆ. ಹಾಗೆ ನೋಡಿದರೆ ವಿಶ್ವದ ಯಾವುದೇ ದೇಶದೊಂದಿಗೆ ನಮ್ಮ ದೇಶವನ್ನು ಹೋಲಿಸಿದರೆ, ಈ ದೇಶದಲ್ಲಿಯೇ ಕಾನೂನುಗಳು ಮಹಿಳೆಯರ ಪರವಾಗಿ ಸಾಕಷ್ಟು ಇವೆ. ಆದರೆ ಜನಗಳಲ್ಲಿ ಅವುಗಳ ಬಗ್ಗೆ ಅರಿವು ಜಾಗರೂಕತೆ ಇಲ್ಲದಿರುವುದರಿಂದ ಜನ ಜಾಗೃತಿ ಮೂಡಿಸುವಂತಹ ಕಾರ್ಯವನ್ನು ಸಮೂಹ ಮಾಧ್ಯಮಗಳು, ಸರ್ಕಾರ, ಸೇವಾ ಮನೋಭಾವನೆಯಿರುವ ಸಂಘ ಸಂಸ್ಥೆಗಳು ಹಾಗೂ ಸಮಾಜ ಸುಧಾರಕರುಗಳು ಮಾಡಬೇಕಾಗಿದೆ. ಹಾಗೆಯೇ ಜನರು ಸಹ ಎಚ್ಚೆತ್ತುಕೊಂಡು, ಇಂತಹ ಅನಿಷ್ಟ ಪದ್ಧತಿಗಳ ವಿರುದ್ಧ, ಅನ್ಯಾಯವಾದಾಗ, ಪ್ರತಿಭಟಿಸಬೇಕು ಹಾಗೂ ತಪ್ಪಿತಸ್ಥರಿಗೆ ನಿರ್ದಾಕ್ಷಿಣ್ಯವಾಗಿ ಶಿಕ್ಷೆಯಾಗುವಂತೆ ಕ್ರಮ ಕೈಗೊಳ್ಳಬೇಕಾಗಿದೆ ಇದಕ್ಕೆ ಪೋಲೀಸ್ ಇಲಾಖೆಯು ಇನ್ನೂ ನಿಷ್ಠೆಯಿಂದ, ಕೆಲಸ ಮಾಡಬೇಕಾಗಿದೆ.

ಈ ಲಿಂಗ ಪರೀಕ್ಷಾ ವಿಧಾನ ಅಲ್ಟ್ರಾಸೌಂಡ್ ಪರೀಕ್ಷೆ ಇತ್ತೀಚಿನದಲ್ಲ. ಅನೇಕ ಕಾಲದಿಂದಲೂ ಆನುವಂಶಿಕವಾಗಿ ಬರುವಂತಹ ಕಾಯಿಲೆಗಳನ್ನು ಭ್ರೂಣದ ಹಂತದಲ್ಲಿಯೇ ಪರೀಕ್ಷಿಸುವ ಕಾರ್ಯ ಇತರೆ ದೇಶಗಳಂತೆ ನಮ್ಮ ದೇಶದಲ್ಲೂ ನಡೆಯುತ್ತಿತ್ತು. ಆದರೆ ಇತ್ತೀಚಿಗೆ ನಮ್ಮ ದೇಶದಲ್ಲಿ ವಿಜ್ಞಾನದ ಮುನ್ನಡೆಯನ್ನು ದುರುಪಯೋಗಪಡಿಸಿಕೊಂಡು ಬಹುತೇಕ ಖಾಸಗೀ ನರ್ಸಿಂಗ್ ಹೋಂನವರು ಸಮಾಜದಲ್ಲಿ ಶೂನ್ಯತೆಗೆ ಕಾರಣರಾಗುತ್ತಿದ್ದಾರೆ. ಮನುಷ್ಯರಲ್ಲಲ್ಲದೇ ಯಾವುದೇ ಪ್ರಾಣಿಗಳನ್ನು ತೆಗೆದುಕೊಂಡರೂ ಶೇಕಡವಾರು ಹೆಣ್ಣು-ಗಂಡು ಸಮಾನವಾಗಿರಬೇಕೆಂಬುದು ಪ್ರಕೃತಿ ನಿಯಮ. ಆದರೆ ಭಾರತದಲ್ಲಿ ಈಗಾಗಲೇ ೧೦೦೦ ಜನ ಪುರುಷರಿಗೆ ೯೩೩ ಸ್ತ್ರೀಯರಿದ್ದಾರೆ. ಇನ್ನು ಎಲ್ಲಾ ರಾಜ್ಯಗಳಲ್ಲಿನ ಲಿಂಗ ಪ್ರಮಾಣವನ್ನು ಗಮನಿಸಿದಾಗ, ಎಲ್ಲೆಡೆಯೂ ಮಹಿಳೆಯರ ಸಂಖ್ಯೆ ಕ್ಷೀಣಿಸುತ್ತಿರುವುದು ಕಂಡುಬಂದಿದೆ, ಕೇರಳದಲ್ಲಿ ಮಾತ್ರ ಮಹಿಳೆಯರ ಸಂಖ್ಯೆ ಅಧಿಕವಾಗಿ (೧೦೩೬) ಕಂಡು ಬಂದರೆ, ಚಂಡಿಘರ್‌ನಲ್ಲಿ ೭೭೯ ಇದ್ದರೆ, ತೀರ ಕಡಿಮೆ ಕಂಡು ಬಂದಿರುವುದು ಅಂಡಮಾನ್ ಮತ್ತು ನಿಕೋಬಾರ್‌ನಲ್ಲಿ (೭೬೦) ಇದೆ.

ಇನ್ನು ಮುಂದೆ ಹೀಗೆಯೇ ಹೆಣ್ಣು ಭ್ರೂಣ ಹತ್ಯೆ ಮುಂದುವರಿದಿದ್ದೇ ಆದರೆ ಮಹಿಳೆಯರ ಸಂಖ್ಯೆ ಇನ್ನೂ ಕ್ಷೀಣಿಸುತ್ತದೆ. ಇದರಿಂದಾಗಿ, ಮುಂದೆ

**ಭಾರತದಲ್ಲಿನ ಜನಸಂಖ್ಯಾ ಬೆಳವಣಿಗೆ ಮತ್ತು ಲಿಂಗಪ್ರಮಾಣ(1901 ರಿಂದ 1981 ರ ವರೆಗಿನದ್ದು.)**

(ಜನಸಂಖ್ಯೆ ಲಕ್ಷಗಳಲ್ಲಿ)

| ವರ್ಷ | ಪುರುಷರು | ಮಹಿಳೆಯರು | ಲಿಂಗಪ್ರಮಾಣ(1000ಪುರುಷರಿಗೆ: ಮಹಿಳೆಯರ ಸಂಖ್ಯೆ) |
|---|---|---|---|
| 1901 | 120.79 | 117.36 | 972 |
| 1911 | 128.39 | 123.71 | 964 |
| 1921 | 128.55 | 122.77 | 955 |
| 1931 | 142.93 | 135.79 | 950 |
| 1941 | 163.69 | 154.69 | 945 |
| 1951 | 185,53 | 175.56 | 946 |
| 1961 | 226.29 | 212.94 | 941 |
| 1971 | 284.05 | 264.11 | 930 |
| 1981 | 354.40 | 330.79 | 938 |

ಪುರುಷರು ಮಹಿಳೆಯರ ಮೇಲೆ ನಡೆಸುವ ದೌರ್ಜನ್ಯ ಅತ್ಯಾಚಾರ ಹೆಚ್ಚಾಗುವ ಸಂಭವ ಇದೆ. ಇದರ ಪರಿಣಾಮ ಇನ್ನೂ 20 ವರ್ಷಗಳಲ್ಲಿ ಕಾಣಬಹುದು. ಬಹುಶಃ ಮುಂದೊಂದು ದಿನ ಅಳಿವಿನ ಹಾದಿಯಲ್ಲಿರುವ ಜೀವಿಗಳೆಂದು ಘೋಷಿಸುವ ಪ್ರಸಂಗವೂ ಬರಬಹುದು. ಸರ್ಕಾರ ವಿಳಂಬ ಮಾಡದೇ ಹೆಣ್ಣು ಶಿಶುಭ್ರೂಣ ಹತ್ಯೆಯಂತಹ ನೀಚಕಾರ್ಯವನ್ನು ಕೂಡಲೇ ತಡೆಗಟ್ಟುವ ಕಾರ್ಯವನ್ನು ಕಾನೂನಿನಿಂದ ಮಾಡಬೇಕಾಗಿದೆ. ಹಾಗೆಯೇ ಇಂತಹ ಕಂಟಕಪ್ರಾಯವಾದ ಕೃತ್ಯಕ್ಕೆ ವೈದ್ಯರ ಪರವಾನಗಿಯನ್ನು ಸರ್ಕಾರ ಕಿತ್ತುಕೊಳ್ಳಬೇಕು ಹಾಗೂ ನರ್ಸಿಂಗ್ ಹೋಂಗಳನ್ನು ಮುಚ್ಚಿಸಬೇಕು. ಹಾಗೆಯೇ ಸಮಾಜದಲ್ಲಿ ಹೆಣ್ಣು ಅಂದಾಕ್ಷಣ ಹೊಣೆಗಾರಿಕೆ, ಜವಾಬ್ದಾರಿ, ಖರ್ಚಿನ ಬಾಬ್ತು ಎನ್ನುವ ಮನೋಭಾವನೆ, ಗಂಡು ಎಂದಾಕ್ಷಣ ಕುಲದೀಪಕ, ಆಸ್ತಿ ಇದ್ದ ಹಾಗೆ ಎನ್ನುವ ಧೋರಣೆ ಹಾಗೆಯೇ ಶ್ರಾದ್ಧ ಮಾಡಲು ಗಂಡು ಮಗುವೇ ಇರಬೇಕೆಂಬ ನಂಬಿಕೆ, ಇತ್ಯಾದಿಗಳು ಎಲ್ಲಿಯವರೆಗೂ ಬದಲಾಗುವುದಿಲ್ಲವೋ ಅಲ್ಲಿಯವರೆಗೂ ಹೆಣ್ಣಿನ ಬಗ್ಗೆ ಇರುವ ನಿಲುವು ಬದಲಾಗುವ ಸಂಭವವಿಲ್ಲ. ಪ್ರತಿಯೊಬ್ಬ ಹೆಣ್ಣು ಮಕ್ಕಳಿಗೂ ಶಿಕ್ಷಣವನ್ನು ನೀಡಿ. ಅವರುಗಳು ಮುಂದೆ ಯಾರ ಹಂಗಿನಲ್ಲೂ ಬದುಕದೇ ಸ್ವಾವಲಂಬಿಗಳಾಗುವಂತೆ ಕ್ರಮಕೈಗೊಂಡರೆ, ಮದುವೆ ಮಾಡಿಕೊಳ್ಳಲೇಬೇಕೆಂಬುದೇ ಜೀವನದ ಮುಖ್ಯಗುರಿಯಲ್ಲವೆಂಬುದನ್ನು ಮನದಟ್ಟು ಮಾಡಿಕೊಂಡರೆ, ವರದಕ್ಷಿಣೆಯ ಹಾವಳಿಯನ್ನು ತಪ್ಪಿಸಬಹುದು.

ಇದರಿಂದಲೇ ವರದಕ್ಷಿಣೆ ಬೇಡಿಕೆಯಿಲ್ಲದೆ, ಮದುವೆಯಾಗಲು ಪುರುಷರು ತಾವೇ ತಾವಾಗಿಯೇ ಬರುವ ಕಾಲವೂ ದೂರವಿರುವುದಿಲ್ಲ. ಹಾಗೆಯೇ ಗಂಡು ಮಕ್ಕಳನ್ನು ಬಯಸುವ ತಂದೆತಾಯಿಗಳು ಎಷ್ಟು ಜನರ ಮನೆಯಲ್ಲಿ ಗಂಡು ಮಕ್ಕಳು ತಂದೆ ತಾಯಿಯರನ್ನು ಸಾಕುತ್ತಿದ್ದಾರೆ. ಎಷ್ಟು ಜನರ ಮನೆಯಲ್ಲಿ ಹೆಣ್ಣು ಮಕ್ಕಳು ತಂದೆ–ತಾಯಿಯರನ್ನು ನೋಡಿಕೊಳ್ಳುತ್ತಿಲ್ಲ. ಮೂಲಭೂತವಾಗಿ ಈ ವಾಸ್ತವಾಂಶವನ್ನು ವಸ್ತುನಿಷ್ಠವಾಗಿ ಯೋಚಿಸಬೇಕಾಗಿದೆ. ಅಷ್ಟೇ ಅಲ್ಲದೆ ಮನೆಗಳಲ್ಲಿ ಕೈಗೊಳ್ಳುವ ಎಲ್ಲಾ ನಿರ್ಧಾರಗಳಲ್ಲೂ ಹೆಣ್ಣಿನ ಮಾತಿಗೂ ಬೆಲೆ ಬರುವವರೆಗೂ ಹಾಗೂ ಹೆಣ್ಣು ತನ್ನ ಬಸುರಿನ ಹಕ್ಕನ್ನು ಪಡೆಯುವವರೆಗೂ ಇಂತಹ ಅನಿಷ್ಟ ಸಂಪ್ರದಾಯಗಳಿಗೆ ಕೊನೆ ಇಲ್ಲ.

ಅಂದನೂರು ಶೋಭಾ

# ಸೀತೆ–ಭೂಮಾತೆಗೆ

ಭಾಗ್ಯ ಜಯಸುದರ್ಶನ್

ಕಂಡಾದಾಯಿತು ಇಲ್ಲಿ
ಬಂದ ಕೆಲಸ ಮುಗಿಯಿತೊ
ಇಲ್ಲವೋ ಬೇಡವೀಗ ಇಲ್ಲಿ
ನನಗೆಂದು
ಉಳಿದಿಹುದೇನೋ ಸೊನ್ನೆ
ಎಷ್ಟು ಸುತ್ತಲಿ?
ಅಧರ ಸುತ್ತು ಮೊತ್ತವೇ ಅಷ್ಟು

ಮಣ್ಣಿನ ಬೊಂಬೆಗೆ ಜೀವ ನೀಡಿ
ಜೀವನಾಡಿಯ ಹಿಡಿದು ಮೀಟಿದೆ
ಮಿಡಿದ ಭಾವಗಳು
ಕಂಡ ಭವಿತವ್ಯಗಳು
ದಿವ್ಯ ರಾಮನಡಿಯಲ್ಲೂ
ಹೃದಯ ಸೇರಿ ತಂಗಲಿಲ್ಲ
ನನ್ನದಾಗಲಿಲ್ಲ
ಮಣ್ಣಿನಲಿ ಮನೆಮಾಡಿರುವ
ಸಣ್ಣತನ ಎಲ್ಲವನ್ನೂ
ಮೀರಿ ಬೆಳೆಯಿತಲ್ಲ

ಮಡದಿಯಾಗುವುದು
ಮಾತೆಯಾಗುವುದು
ಅಷ್ಟು ಸುಲಭದ ಮಾತಲ್ಲವಿಲ್ಲಿ

ಕಿರಿದು ದೃಷ್ಟಿಯಲಿ
ಕಾಣಲಾರದು ಎಂದಿಗೂ ಇಡೀ ಸೃಷ್ಟಿ
ಅಗ್ನಿ ಪರೀಕ್ಷೆಗೂ ಒಡ್ಡಿಕೊಂಡರೂ
[illegible] ಉಳಿಯಿತಲ್ಲ
ನನ್ನತನ ಅಳಿಯದಾಯಿತಲ್ಲ!

ಇನ್ನು ಇದ್ದು ಮಾಡುವುದಾದರೂ
ಏನಿದೆ ಇಲ್ಲಿ?

ಜೀವಂತ ಬೊಂಬೆ
ಅಡಿಗಡಿಗೆ ಅಗ್ನಿ ಪರೀಕ್ಷೆ
ನಿರ್ಜೀವ ಬೊಂಬೆಗೂ ಬೇಡದ ಜಗತ್ತು

ಎಲ್ಲಾ ಜೀವಿಗಳದೂ ಕಲ್ಯಾಣವೊಂದೇ
ರಾಮನ ಜಗತ್ತು
ಆವನೆದೆಯ ಜಗತ್ತಿನಲಿ ಅನ್ಯಳಾದ
ನನಗೆ ಕರ್ತವ್ಯವೇನು ಪಾಲನೆ ಏನು
ವಿರಕ್ತಿ ಬಂದ ಬಳಿಕ ಮುಕ್ತಿಯೊಂದೇ
ತಿಳಿದ ಮಾರ್ಗ
ಈಗ ನಿನ್ನುದರವೊಂದೇ ಇನ್ನುಳಿದ ಜಾಗ

ಬರುವುದಿಲ್ಲ ಬರಿಗೈಲಿ
ಮಣ್ಣಿನ ಮಗಳು ನಾನು
ಇಲ್ಲಿ ಉಂಡುದನ್ನೆಲ್ಲಾ ಉಡಿಯಲ್ಲಿಟ್ಟು
ತರುತ್ತಿದ್ದೇನೆ
ಮರೆಯದೆ
ನಡೆದಾಡಿದ ನೆಲ ಉಸಿರಾಡಿದ ಗಾಳಿ
ಕುಡಿದ ಜಲ ತಂಪು ನೀಡಿದ ತಾಣ
ಮರೆಯಲಾಗುವುದೆ?
ರಘುವೀರನ ವಕ್ಷಸ್ಥಲ ಹನುಮನ ಮನ
ಲಕ್ಷ್ಮಣನ ನಿಷ್ಠೆ ಎಲ್ಲಕ್ಕಿಂತ ಹೆಚ್ಚಾಗಿ
ರಾವಣನ ಧೀಮಂತತೆ
ಕೊನೆಯೊಂದು ಬೇಡಿಕೆ ಭೂಮಾತೆ
ಕೊನೆಯಾಗಬೇಕು
ಭೂಜಾತೆ ಸೀತೆಯೊಂದಿಗೆ
ಭೋಗಕ್ಕವಾಗಬೇಕು ಈ ಹತಾಶೆ [illegible]

# ಅವಿವಾಹಿತ ಮಹಿಳೆಯರ ಅಳಲು

ಹೆಚ್. ಎಸ್. ಉಷಾರಾಣಿ

ಪ್ರೌಢ ವಿವಾಹದಿಂದಾಗಿ ಅವಿವಾಹಿತರ ಸಂಖ್ಯೆ ಗಮನಾರ್ಹವಾಗಿದ್ದರೆ, ಬಾಲ್ಯ ವಿವಾಹದಿಂದಾಗಿ ವಿಧವೆಯರ ಸಂಖ್ಯೆ ಗಣನೀಯ ಪ್ರಮಾಣದಲ್ಲಿತ್ತೆಂಬುದನ್ನು ಅಲ್ಲಗಳೆಯುವಂತಿಲ್ಲ. ಬಾಲ ವಿಧವೆಯರ ಅಳಲು ಹೇಳತೀರದ್ದಾಗಿತ್ತು. ಆದಾಗ್ಯೂ "ಚಿಕ್ಕ ವಯಸ್ಸಿನಲ್ಲಿ ವಿವಾಹ ಏರ್ಪಡಿಸುತ್ತಿದ್ದಾಗ ಹುಡುಗಿಯರು ಹೊಂದಿಕೊಂಡು ಹೋಗುತ್ತಿದ್ದರು. ಪ್ರೌಢರಾದ ಬಳಿಕ ಮದುವೆ ಮಾಡುತ್ತಿರುವುದರಿಂದ, ಮತ್ತೊಬ್ಬರೊಡನೆ ಹೊಂದಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಬುದ್ಧಿ ಬಲಿತಿರುತ್ತದೆ. ತಮ್ಮದೇ ಆದ ವ್ಯಕ್ತಿತ್ವ ಬೆಳೆಸಿಕೊಂಡಿರುತ್ತಾರೆ. ಹಾಗಾಗಿ ಬಂದ ವರನನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳದೆ ಅವಿವಾಹಿತರಾಗಿ ಉಳಿಯುತ್ತಾರೆ" ಎಂದು ಜನ ಹೇಳುವುದು ನಿಮ್ಮ ಕಿವಿಗೆ ಬಿದ್ದಿಲ್ಲವೇ?

ಸಮಾಜದಲ್ಲಿ ಸ್ಥಾನಮಾನ ಗಳಿಸಲು ವಿವಾಹ ಅಗತ್ಯವೆಂಬುದು ಹಲವರ ಅಭಿಮತ "ಗಂಡ ಮಕ್ಕಳಿದ್ದರೆ ಜೀವನ ಸಾರ್ಥಕ, ಸಮಾಜದಲ್ಲಿ ಸ್ಥಾನಮಾನ, ಇಲ್ಲದಿದ್ದಲ್ಲಿ ಜೀವನವೇ ಬರಡು" ಎಂದು ಭಾವಿಸುವವರು ತಮ್ಮ ಬಾಳನ್ನು ದುರಂತಮಯವಾಗಿಸಿಕೊಳ್ಳುತ್ತಾರೆ. ವಿವಾಹಿತರಿಗೆ ಸಮಾಜ ನೀಡುವ ಪ್ರತಿಷ್ಠೆ, ಸ್ಥಾನಮಾನಗಳೇನು ಎಂಬುದಕ್ಕೆ ಸುಬ್ಬಮ್ಮನ ನಿದರ್ಶನ ಸಾಕು. ದೀರ್ಘಕಾಲ ವೈವಾಹಿಕ ಜೀವನ ನಡೆಸಿದ ಸಾಧು ಸ್ವಭಾವದ ಸುಬ್ಬಮ್ಮ, ಕೊನೆಗಾಲದಲ್ಲಿ ಪತಿ ಪುತ್ರರಿಂದ ಕಡೆಗಣಿಸಲ್ಪಟ್ಟು ಅನಾಥಳಾಗಿ ದೇಹ ತ್ಯಜಿಸಿದಳು. ಆಕೆಯ ಅಂತ್ಯಕ್ರಿಯೆ ನಡೆಸಿದವರು ಹಿತೈಷಿಗಳೇ ವಿನಃ ಬಂಧುಗಳಲ್ಲ. ಸುಬ್ಬಮ್ಮನ ಅನುಭವ ಅನೇಕ ಮಹಿಳೆಯರದ್ದಾಗಿದೆ. ಇಂತಹ ಘಟನೆಗಳನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ವೀಕ್ಷಿಸುತ್ತಿರುವ ಮಹಿಳೆಯರು ವಿವಾಹ ಬಂಧನದಿಂದಲೇ ಸ್ಥಾನಮಾನ ದೊರೆಯುತ್ತದೆಂಬ ಭ್ರಮೆಯಿಂದ ಹೊರ ಬರಬೇಕು. ನಿರ್ದಿಷ್ಟ ವರಮಾನ ಸಿಗುವ ನೌಕರಿ ದೊರೆಯದಿದ್ದಲ್ಲಿ ಸ್ವ-ಉದ್ಯೋಗದಲ್ಲಿ ತಮ್ಮನ್ನು ತೊಡಗಿಸಿಕೊಂಡರೂ ಜೀವನ ಸಾರ್ಥಕವಾಗುವುದಂತೂ ನಿಜ. ಉದಾಹರಣೆಗೆ, ಹೊಲಿಯುವುದು, ಹಪ್ಪಳ, ಸಂಡಿಗೆ, ಮೆಣಸಿನ ಪುಡಿ ಮಾಡುವುದು, ಬಳಪ ತಯಾರಿಸುವುದು, ಪೊಟ್ಟಣ ತಯಾರಿಸುವುದು, ಸಸಿ ಬೆಳೆಸುವುದು ಇತ್ಯಾದಿ ಕೆಲಸಗಳಲ್ಲಿ ನಿರತರಾದಲ್ಲಿ ಉತ್ತಮ ರೀತಿಯಲ್ಲಿ ಸಮಯ ಕಳೆದಂತಾಗುತ್ತದೆ. "ಅನ್ನದಂಡ, ಭೂಮಿ ಭಾರ" ಎಂಬ ಭಾವನೆ ದೂರವಾಗಿ, ಹತ್ತು ಜನರಿಗೆ ತಮ್ಮ ಅಗತ್ಯವಿರುವುದು ಗೋಚರವಾಗುತ್ತದೆ. ಹೀಗೆ ನಾಲ್ಕು ಜನರಿಗೆ ಬೇಕಾದ ವ್ಯಕ್ತಿಯಾಗಿ ಸಮಾಜದಲ್ಲಿ ಗೌರವ ಸ್ಥಾನ ಗಳಿಸಬಹುದು.

ಸೋಮಾರಿತನ ಮೈಗೂಡಿಸಿಕೊಂಡವರಿಗೆ ಸಮಾಜದಲ್ಲಿ ಗೌರವವಿಲ್ಲ. ಮಹಿಳೆಯರಾಗಲಿ, ಪುರುಷರಾಗಲಿ ಸೋಮಾರಿಗಳಾಗಿದ್ದಲ್ಲಿ ಸಮಾಜ ಅವರನ್ನು ಗುರುತಿಸುವುದಿಲ್ಲ. ಪ್ರತಿಯೊಬ್ಬರೂ ಚಟುವಟಿಕೆಯಿಂದಿದ್ದು, ತಮ್ಮನ್ನು ರಚನಾತ್ಮಕ ಕಾರ್ಯಗಳಲ್ಲಿ ತೊಗಿಸಿಕೊಳ್ಳುವುದು ಅನಿವಾರ್ಯವಾಗಿದೆ. ಏಕೆಂದರೆ ಹೇಗೂ ವಿವಾಹ ಸಂದರ್ಭದಲ್ಲಿ ಹುಡುಗಿ ಕಡೆಯಿಂದ ಸಾಕಷ್ಟು ವಸೂಲಿ ಮಾಡಬಹುದು, ಕೈ ತುಂಬ ಸಂಬಳ ತರುವ ಹುಡುಗನನ್ನು ವಿವಾಹವಾದರೆ ಆರಾಮವಾಗಿರಬಹುದು ಎಂದಂದುಕೊಂಡು ಸ್ವಪ್ನಲೋಕದಲ್ಲಿ ವಿಹರಿಸುತ್ತಾ, ದುಡಿಯುವ ವಯಸ್ಸಿನಲ್ಲಿ ಸೋಮಾರಿಗಳಾಗಿ ಕಾಲಕಳೆಯುತ್ತಿರುತ್ತಾರೆ. ಅಲ್ಲದೆ "ತನ್ನ ಯೋಗ್ಯತೆಗೆ ಸಣ್ಣ ಕೆಲಸ ಹಿಡಿಸದು, ದೊಡ್ಡ ಕೆಲಸ ಸಿಗಬೇಕು, ಇಂತಿಷ್ಟು ಸಂಬಳ ಬರಬೇಕು" ಎಂದು ಕೈ ಕಟ್ಟಿ ಕುಳಿತರಾದೀತೆ? ಯೋಗ್ಯತೆ ಇಲ್ಲದಿದ್ದರೂ ಬಡಾಯಿ ಕೊಚ್ಚಿಕೊಳ್ಳುವ ಸೋಮಾರಿಗಳಿಗೆ ಸಮಾಜ ಗೌರವ ನೀಡದು. ಹೆಣ್ಣುಮಕ್ಕಳು ಹೀಗೆ ವರ್ತಿಸಿದಲ್ಲಿ, ಕಸ ಮುಸುರೆ ಮಾಡಿಯಾದರೂ ಸೋಮಾರಿತನ ಬಿಡಬೇಕೆಂದು ಛೀಮಾರಿ ಹಾಕುವವರು, ಗಂಡು ಮಕ್ಕಳೆಂದರೆ, "ಪಾಪ, ಅವನ ಹಣೆಬರಹ, ಗ್ರಹಚಾರ" ಎಂದು ಸೋಮಾರಿತನಕ್ಕೆ ಕುಮ್ಮಕ್ಕು ಕೊಡು

ತ್ತಾರಲ್ಲ! ಈ ತಾರತಮ್ಯ ಏಕೆ? "ಗಿಡವಾಗಿ ಬಗ್ಗದ್ದು ಮರವಾಗಿ ಒಗ್ಗೀತೆ? ಎಂಬ ಗಾದೆಯಂತೆ, ತಿದ್ದುವ ವಯಸ್ಸಿನಲ್ಲಿ ಮಕ್ಕಳನ್ನು ತಿದ್ದದೆ ಪ್ರಾಪ್ತವಯಸ್ಸಿಗೆ ಬಂದಾಗ ಗ್ರಹಚಾರವನ್ನು ತಡೆಯಲು ನಾವ್ಯಾರು? ಎಂದು ಸಮಜಾಯಿಷಿಕೊಳ್ಳುವ ಪೋಷಕರೂ ಸಮಾಜದ ವಕ್ರದೃಷ್ಟಿಗೆ ಪಾತ್ರರಾಗುತ್ತಾರೆಂದರೆ ತಪ್ಪಾಗಲಾರದು.

ಪೋಷಕರ ಮನೋಭಾವ ಬದಲಾಗದಿರುವುದು ಮಹಿಳೆಗೆ ಅಡ್ಡಿ, ಆತಂಕಗಳನ್ನು ತಂದಿದೆ, "ಸ್ವಜಾತಿ ವಿವಾಹಕ್ಕೆ ಮಾತ್ರ ನಮ್ಮ ಅನುಮತಿ, ಉಳಿದದ್ದಕ್ಕೆ ನೀವುಂಟು, ಮೂರು ಲೋಕವುಂಟು, ಅವರನ್ನೇ ಕೇಳಿ ಮಾಡಿಸ್ಕೊಳ್ಳಿ" ಎಂದು ಖಡಾಖಂಡಿತವಾಗಿ ಮಾತನಾಡುವ ಪೋಷಕರನ್ನೆದುರಿಸುವ ಧೈರ್ಯವಿದ್ದವರು ಮುನ್ನುಗ್ಗುತ್ತಿದ್ದಾರೆ. ಉಳಿದವರು ಪೋಷಕರ ಕೃಪಾಕಟಾಕ್ಷದಲ್ಲೇ ಕಾಲ ನೂಕುತ್ತಿದ್ದಾರೆ. ಪರಸ್ಪರರನ್ನು ಅರ್ಥಮಾಡಿಕೊಂಡು ಹೊಂದಾಣಿಕೆಯಿಂದ ಬದುಕುವ ಪ್ರವೃತ್ತಿಗೆ ಆದ್ಯತೆ ನೀಡದ ಕೇವಲ ಜಾತಿ ಎಂಬ ಕಂದಕಕ್ಕೆ ಪ್ರಾಧಾನ್ಯತೆ ನೀಡುವ ಪೋಷಕ ವರ್ಗವನ್ನು ಏನೆನ್ನಬೇಕು? ಮನೋಭಾವ ಮಾರ್ಪಡಿಸಿಕೊಳ್ಳುವುದು ಹೇಳಿದಷ್ಟು ಸುಲಭವಲ್ಲ. ಆದರೆ ಕಾಲಕ್ಕೆ ತಕ್ಕಂತೆ ಬದಲಾಗಬೇಕು. ಹಾಗಿದ್ದರೆ ಮಾತ್ರ ಸಮಾಜದಲ್ಲಿ ಆರೋಗ್ಯಕರ ಸ್ಪರ್ಧೆ ಸಾಧ್ಯ.

ಪುರುಷರ ಕೀಳರಿಮೆ, ವಿದ್ಯಾವಂತ ಉದ್ಯೋಗಸ್ಥ ಸ್ಫುರದ್ರೂಪಿ ಮಹಿಳೆಯರಿಗೆ ಸವಾಲನೊಡ್ಡಿದೆ. ಪುರುಷರು ತಮ್ಮಿಂದ ಕಡಿಮೆ ವಯಸ್ಸಿನ ಹಾಗೂ ಕೆಳ ಹುದ್ದೆಯಲ್ಲಿರುವ ಮಹಿಳೆಯನ್ನು ಆಯ್ಕೆ ಮಾಡಿಕೊಳ್ಳಲು ಪ್ರೇರೇಪಣೆ ನೀಡುತ್ತಿರುವುದು ಅವರಲ್ಲಡಗಿರುವ ಕೀಳರಿಮೆಯಲ್ಲವೆ? ತನ್ನಿಂದಲೂ ಹೆಚ್ಚು ವ್ಯಾಸಂಗ ಮಾಡಿ ಉನ್ನತ ಹುದ್ದೆಯಲ್ಲಿರುವ ಕನ್ಯೆಯನ್ನು ವಿವಾಹವಾದಲ್ಲಿ ತನ್ನ ಬಾಳು ಗೋಳಾಟವಾದೀತು ಎಂಬ ಭೀತಿ ಅವರನ್ನು ಕಾಡುತ್ತಿರುತ್ತದೆ.

ಇಲ್ಲಿ ವ್ಯಕ್ತಿಯ ಗುಣ ಸ್ವಭಾವಗಳಿಗೆ ಬೆಲೆಕಟ್ಟುವ ಬದಲಿಗೆ ಅಂತಸ್ತಿಗೆ ಬೆಲೆ ಕಟ್ಟುವುದರಿಂದ ಪುರುಷ ತನ್ನ ಪ್ರಾಧಾನ್ಯತೆಯನ್ನು ಉಳಿಸಿಕೊಳ್ಳುತ್ತಾನೆ. ಸಾಂಸ್ಕೃತಿಕ ಒತ್ತಡದಿಂದ ಬಿಡುಗಡೆಯಾಗಲು ಪುರುಷರು ಯತ್ನಿಸದಿರುವುದೇ ಅವರ ಜೀವನ ಕ್ರಮದಲ್ಲಿ ಸುಧಾರಣೆ ಕಂಡುಬರದಿರಲು ಪ್ರಮುಖ ಕಾರಣ. ಹೀಗಂದ ಮಾತ್ರಕ್ಕೆ ಪುರುಷ ಸಮುದಾಯವನ್ನು ದೂಷಿಸುತ್ತಿರುವುದಾಗಿ ಭಾವಿಸಬಾರದು. ವಿದ್ಯೆಗೆ ತಕ್ಕ ಚಿಂತನೆ ರೂಢಿಸಿಕೊಂಡವರು. ತಮ್ಮಿಂದ ಹಿರಿಯ ಹಾಗೆ ಉನ್ನತ ಹುದ್ದೆಯಲ್ಲಿರುವ ಮಹಿಳೆಯನ್ನು ತಮ್ಮ ಬಾಳ ಸಂಗಾತಿಯಾಗಿ ಸ್ವೀಕರಿಸಿದ್ದಾರೆ. ಆದರೆ ಇಂತಹವರ ಸಂಖ್ಯೆ ಕಡಿಮೆ.

ಅವಿವಾಹಿತರನ್ನು ಸಂದೇಹಾಸ್ಪವಾಗಿ ನೋಡಲಾಗುತ್ತಿದೆ. ವಯಸ್ಸಿಗೆ ಬಂದ ಮಕ್ಕಳಿದ್ದಲ್ಲಿ ಮನೆಗೆ ಆಗಮಿಸುವ ಪುರುಷ ಅಥವಾ ಮಹಿಳೆ ಅವಿವಾಹಿತರಾಗಿದ್ದರಂತೂ ಪೋಷಕರ ದೃಷ್ಟಿಕೋನ ವಿಭಿನ್ನವಾಗಿರುತ್ತದೆ. ಇನ್ನು ಚಿಕ್ಕ ವಯಸ್ಸಿನ ವಿವಾಹಿತ ಸ್ನೇಹಿತರ ಮನೆಗೆ ಹೋಗುವುದು ಕಷ್ಟವೆ ಎಲ್ಲಿ ತನ್ನ ಪತಿ | ಪತ್ನಿ ಬಂದ ಸ್ನೇಹಿತ | ಸ್ನೇಹಿತೆಯರಲ್ಲಿ ಅನುರಕ್ತರಾಗುತ್ತಾರೋ ಎಂದು ಪರಸ್ಪರರು ಸಂದೇಹಿಸುತ್ತಾರೆ. ಸೂಕ್ಷ್ಮಮತಿಗಳಾಗಿದ್ದಲ್ಲಿ ಕ್ರಮೇಣ ಎಲ್ಲರ ಸಹವಾಸದಿಂದ ಕಳಚಿಕೊಳ್ಳುವುದೇ ಉತ್ತಮ ಪರಿಹಾರವೆಂದು ಭಾವಿಸುತ್ತಾರೆ. ಆದೇ ಛಲವುಳ್ಳವರು ಯಾರ ಮನೆಗೂ ಹೋಗದೆ ತಮ್ಮ ಪಾಡಿಗೆ ಮನೆ | ಕಛೇರಿ ಕೆಲಸ ಮುಗಿಸಿ ಮನೆಯಲ್ಲೇ ಕಾಲಕಳೆಯುವ ನಿರ್ಧಾರ ಕೈಗೊಳ್ಳುವರಲ್ಲದೆ, ಇತರರು ತಮ್ಮ ಮನೆಗೆ ಬರುವಂತೆ ಮಾಡಿಕೊಳ್ಳುತ್ತಾರೆ. ಅಂದರೆ ತಮ್ಮ ವ್ಯಕ್ತಿತ್ವವನ್ನು ಸಾಬೀತು ಪಡಿಸುತ್ತಾರೆ.

ಮಹಿಳೆಯರ ಸಾಧನೆಗೂ ವಿವಾಹಕ್ಕೂ ನಂಟಿದೆಯೇ? ನಿರ್ದಿಷ್ಟ ಗುರಿ ಹೊಂದಲು ಲಿಂಗಭೇದವಿಲ್ಲ. ಗುರಿ ಸಾಧಿಸಿದಾಕ್ಷಣ ಅದರಲ್ಲೂ ಮಹಿಳೆಯಾಗಿದ್ದಲ್ಲಿ, "ಅವಿವಾಹಿತರು, ಯಾವ ಜವಾಬ್ದಾರಿ ಇಲ್ಲ" ಎಂದು ಉದಾಸೀನದಿಂದ ಬಹು ಹಗುರವಾಗಿ ಮಾತನಾಡುವುದನ್ನು ಕೇಳಿದ್ದೀರಲ್ಲಾ! ಇದರ ಅರ್ಥ ವಿವಾಹಿತರಿಗೆ ಏಕಾಗ್ರತೆ ಸಾಧ್ಯವಾಗುವುದಿಲ್ಲ ಎಂದಲ್ಲವೆ? ವಿವಾಹಿತರು ವಿವಿಧ ಸಾಮರ್ಥ್ಯಗಳಲ್ಲಿ ಸಮಾಜಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ. ಇದನ್ನು ಕಡೆಗಣಿಸಲಾದೀತೆ? ವೈಯಕ್ತಿಕ ಸೌಲಭ್ಯ ಮತ್ತೊಬ್ಬರನ್ನು ಹಿಯಾಳಿಸುವುದರ ಮೂಲಕ ತೋರ್ಪಡಿಸಿಕೊಳ್ಳುತ್ತಿದ್ದೇವೆಂಬುದರ ಅರಿವು ಇರುವುದಿಲ್ಲ ಕೆಲವರಿಗೆ, ವಿವಾಹಿತರ

ಸಾಧನೆಗೂ ಹೀಗೆ ಹೇಳುವುದುಂಟು. "ಮನೆಯವರ ಸಂಪೂರ್ಣ ಸಹಕಾರವಿದೆ, ಸಮಸ್ಯೆಗಳನ್ನು ಹಚ್ಚಿಕೊಳ್ಳುವುದಿಲ್ಲ; ಮನೆ ಕಡೆ ಗಮನ ಕೊಡುವುದಿಲ್ಲ" ಎಂದು. ಇಲ್ಲಿ ಪ್ರಶ್ನೆ ಇದೆ, ಸಮಸ್ಯೆಗಳನ್ನು ಹಚ್ಚಿಕೊಂಡಾಕ್ಷಣ ಅವು ಬಗೆಹರಿಯುತ್ತವೆಯೆ? ಯಾವ ಮಾರ್ಗ ಅನುಸರಿಸಿದರೆ ದಾರಿ ಸುಗಮವಾದೀತು ಎಂಬುದನ್ನು ತರ್ಕಬದ್ಧವಾಗಿ ಚಿಂತಿಸಿ ಸಮಸ್ಯೆಯನ್ನು ಸಮಸ್ಯೆಯಂತೆ ತೋರ್ಪಡಿಸಿಕೊಳ್ಳದೆ ಬಗೆಹರಿಸಿಕೊಳ್ಳುವರು ಕೆಲವರು. ಮತ್ತೆ ಕೆಲವರು "ನಮಗಿರುವಷ್ಟು ಸಮಸ್ಯೆ(ಅದು ಸಣ್ಣದಾಗಿದ್ದರೂ ಸರಿ ದೊಡ್ಡದು ಮಾಡಿಕೊಂಡು) ನಿಮಗಿರುತ್ತಿದ್ದರೆ ನೀವು ನಮ್ಮಂತೆ ಇರಬೇಕಾಗುತ್ತಿತ್ತು" ಎಂದು ವಾದಿಸುತ್ತಾರೆ. ಈ ಅಸೂಯೆಭರಿತ ವಾದವನ್ನು ಒಪ್ಪುವಿರಾ?

ಮಹಿಳೆ ಚಿತ್ತಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಬೇಕಾಗಿದೆ. ಇಲ್ಲದಿದ್ದಲ್ಲಿ ಬವಣೆಗಳನ್ನು ಎದುರು ಹಾಕಿಕೊಂಡಂತೆಯೇ ಸರಿ. ಮನೆಯಲ್ಲಿರುವ ಅವಿವಾಹಿತ ಮಹಿಳೆಯರಿಗೆ ನೆರೆಹೊರೆಯವರ ಕುಹಕ ನೋಟ, ಹಿಯಾಳಿಸುವಿಕೆ ತಪ್ಪಿದ್ದಲ್ಲ. ಮನೆಯಿಂದ ಹೊರಬಂದ ಮಹಿಳೆ ನೂರಾರು ಜನರ ಪ್ರಶ್ನೆಗಳಿಗೆ ಉತ್ತರಿಸಬೇಕಾಗುತ್ತದೆ. ಸುಮನಾ ಉದ್ಯೋಗಸ್ಥ ಮಹಿಳೆ, ಹತ್ತು ಕಿಲೋಮೀಟರ್ ದೂರದಲ್ಲಿದೆ ಆಕೆಯ ಕಛೇರಿ, ಬಸ್‌ನಲ್ಲಿ ಪ್ರಯಾಣಿಸುವಾಗ, ಬಸ್‌ಗಾಗಿ ಕಾಯುತ್ತಿರುವಾಗ, ಕಛೇರಿಯಲ್ಲಿರುವಾಗ ತನ್ನ ಸುತ್ತಮುತ್ತಲಿನ ಜನರ ಕುತೂಹಲ ಭರಿತ ಕಣ್ಣುಗಳಿಗೆ ವಸ್ತುವಾಗಿದ್ದ ಸುಮನಾಳಿಗೆ ಎದುರಿಸಲಾಗದ ಸಮಸ್ಯೆಯೆಂದರ, ನಿಮಗೆ ಮದುವೆಯಾಗಿದೆಯೆ? — ಎಂಬ ಪ್ರಶ್ನೆಗೆ ಉತ್ತರಿಸಲು ಕಷ್ಟವಾಗುತ್ತಿದ್ದುದು. ಆಕೆಯದು ಗೊಣಗುವ ಸ್ವಭಾವ. ಹಾಗಾಗಿ ಈ ಜನಗಳಿಗೆ ಇದೊಂದು ಪ್ರಶ್ನೆ ಬಿಟ್ಟರೆ ಇನ್ನ್ಯಾವುದೂ ಹೊಳೆಯುವುದಿಲ್ಲವೇನೋ? ಆಗುವವರೆಗೆ ಎಲ್ಲರಿಂದಲೂ ಎದುರಿಸಬೇಕಾದ ಈ ಪ್ರಶ್ನೆಗೆ ಉತ್ತರಿಸುವುದಾದರೂ ಹೇಗೆ ಎಂದುಕೊಳ್ಳುತ್ತಿದ್ದ ಆಕೆ ಎಷ್ಟೋ ಬಾರಿ ಅಡಿತೋರಿಸಿದ್ದುಂಟು. ಕೊನೆಗೊಮ್ಮೆ ಇದೇ ವಿಚಾರದಲ್ಲಿ ತಲೆಕೆಡಿಸಿಕೊಂಡಿದ್ದ ಆಕೆ ನೌಕರಿಗೆ ರಾಜಿನಾಮೆ ನೀಡಿದ್ದಲ್ಲದೆ ಮತ್ತೆ ಹೊಸ ನೌಕರಿ ಹಿಡಿಯಲು ಅಲೆದಾಡುತ್ತಿದ್ದಾಳೆ. ಉಲ್ಲೇಖಿತ ಪ್ರಶ್ನೆಗಳು ಎದುರಾದಾಗ ನಂದಿನಿಯ ಉತ್ತರವೇನೆಂದರೆ, ವಿವಾಹವಾಗಿದೆ, ನಾಲ್ಕು ಮಕ್ಕಳಿದ್ದಾರೆ, ಮನೆಯವರು ಬಿಸಿನೆಸ್ ಮಾಡ್ತಾರೆ....... ಇತ್ಯಾದಿ ಉತ್ತರದಿಂದ ಸಂತೃಪ್ತರಾದ ಮುಗ್ಧ ಜನ ಆಕೆಯ ಬೆನ್ನು ತಟ್ಟಿ, "ಶಹಬಾಸ್" ಎನ್ನುತ್ತಿದ್ದರಂತೆ. ಈ ರೀತಿ ಉತ್ತರಿಸಲು ಯಾವ ಅಳುಕಿಲ್ಲದ ನಂದಿನಿ ನಗುನಗುತ್ತಲೇ ತನ್ನ ನೌಕರಿಯಲ್ಲೂ ಮುಂದುವರಿಯುತ್ತಿದ್ದಾಳೆ. ಯಾರಿಗೂ ಹೊರೆಯಾಗಿಲ್ಲ. ಸಂದರ್ಭೋಚಿತವಾಗಿ ಉತ್ತರಿಸಿ, ಪರಿಸ್ಥಿತಿಯನ್ನು ಗೆಲ್ಲುವುದಲ್ಲದೆ, ಮಾನಸಿಕವಾಗಿ ಕುಗ್ಗಿದಲ್ಲಿ, ಲಾಭಕ್ಕಿಂತ ನಷ್ಟವೇ ಹೆಚ್ಚಲ್ಲವೇ?

ಕೊನೆಯದಾಗಿ, ಎಲ್ಲಕ್ಕಿಂತ ಮಿಗಿಲಾದುದು ಆತ್ಮವಿಶ್ವಾಸ. ಸಮಸ್ಯೆಗಳು ಯಾರಿಗಿಲ್ಲ? ನವಜಾತ ಶಿಶುವಿಗೂ ಇದೆ. ಅದು ಬದುಕಲು ನಿರಂತರ ಹೋರಾಟ ನಡೆಸುತ್ತದಲ್ಲವೆ? ಇದು ಬದುಕಿನ ವಾಸ್ತವತೆ. ಇದನ್ನು ಗಮನದಲ್ಲಿಟ್ಟುಕೊಂಡು ಎದುರಾಗುವ ಸಮಸ್ಯೆಗಳನ್ನು ಆತ್ಮವಿಶ್ವಾಸದಿಂದ ಎದುರಿಸುವ ಕಲೆ ಬೆಳೆಸಿಕೊಳ್ಳುವುದು ಅವಿವಾಹಿತರಿಗೆ ಮಾತ್ರವಲ್ಲ, ವಿವಾಹಿತರಿಗೂ ಅಷ್ಟೇ ಮುಖ್ಯ. ಆತ್ಮವಿಶ್ವಾಸದ ಕೊರತೆಯುಳ್ಳವರು ಸಮಸ್ಯೆಗಳ ಸುಳಿಯಿಂದ ಹೊರಬರಲು ಸಾಧ್ಯವಾಗದೆ, ಜರ್ಜರಿತರಾಗುವುದಂತೂ ಖಚಿತ.

---

ಜೀವನಕೆ ಬೇಕು ದಿವ್ಯತೆ,
ಬಾಳಿಗೆ ಬೇಕು ಭವ್ಯತೆ,
ಬುದ್ಧಿಗೆ ಬೇಕು ವಿಶಾಲತೆ,
ಮನಕೆ ಬೇಕು ಪ್ರಶಾಂತತೆ,
ಕರ್ಮದಲ್ಲಿ ಬೇಕು ಶ್ರೇಷ್ಠತೆ
ಮಾತಿನಲಿ ಬೇಕು ಮಧುರತೆ,
ಬರೆಯಲು ಬೇಕು ಏಕಾಗ್ರತೆ,
ದೇವಗೆ ಬೇಕು ಪರಿಶುದ್ಧತೆ,
ಹೆಣ್ಣಿಗೆ ಬೇಕು ಸಕಲದಲ್ಲೂ ಜಾಗ್ರತೆ.

ಶಕುಂತಲ ಎಸ್.
ಕಾಡುಗುಡಿ

---

# ಒಂದು ಸಫಲ ಪ್ರಯೋಗ

ಡಾ|| ಎಚ್. ಎಸ್. ಸುಜಾತ.

ಒಂದೂವರೆ ದಶಕದ ಹಿಂದಿನ ಸಂಗತಿ. ಬುದ್ಧಿವಂತ ವಿದ್ಯಾರ್ಥಿಗಳ ಒಂದು ಮಾದರಿ ತರಗತಿ. ಪಾಠವನ್ನು ಕೇಳುವುದಾಗಲೀ, ಪ್ರಶ್ನೆಗಳಿಗೆ ಉತ್ತರಿಸುವುದಾಗಲೀ ಆ ವಿದ್ಯಾರ್ಥಿಗಳಿಗೆ ಎಂದೂ ಹೊರೆ ಆಗಲಿಲ್ಲ. ಯಾರಾದರೊಬ್ಬರಿಗೆ ಪ್ರಶ್ನೆ ಹಾಕಿದಾಗ ತಮ್ಮನ್ನು ಕೇಳಲಿಲ್ಲವಲ್ಲ ಎಂಬ ಅಸಮಾಧಾನ ಮಿಕ್ಕವರ ಮುಖಗಳಲ್ಲಿ ಕಾಣಿಸಿಕೊಳ್ಳುತ್ತಿತ್ತು. ಅವರ ಉತ್ತರ ಹೇಳುವ ತವಕ ನನಗೆ ಅರ್ಥವಾಗುತ್ತಿತ್ತು, ಸಂತೋಷವಾಗುತ್ತಿತ್ತು ವಾಸ್ತವವಾಗಿ ಆ ತರಗತಿಗೆ ಬೋಧಿಸುತ್ತಿದ್ದ ಎಲ್ಲ ಅಧ್ಯಾಪಕರ ಅನುಭವವೂ ಹಾಗೇ ಇತ್ತು.

ಕೆಲವು ದಿನಗಳಲ್ಲಿ ನಾನು ಒಂದು ವಿಷಯನನ್ನು ಗಮನಿಸಿದೆ. ತರಗತಿಯ ಒಬ್ಬ ವಿದ್ಯಾರ್ಥಿನಿ ಮಾತ್ರ ಸದಾ ಮೌನಿಯಾಗಿರುತ್ತಿದ್ದಳು. ಆ ಹುಡುಗಿ ಬಾಯಿ ಬಿಟ್ಟಿದ್ದನ್ನೇ ನಾನು ಕಂಡಿರಲಿಲ್ಲ. ಹಾಜರಿ ಕೂಗುವ ಸಮಯದಲ್ಲಿಯೂ ಎದ್ದು ತಲೆಬಾಗಿ ಕೂಡುತ್ತಿದ್ದಳು ಅಷ್ಟೇ. ಅವಳು ಸ್ವಭಾವತಃ ಜಾಣೆ ಎಂದೇ ನನಗೆ ತೋರುತ್ತಿತ್ತು. ನಿಜದಲ್ಲಿ ಅವಳ ಹಾಸ್ಯಪ್ರಜ್ಞೆ ಅತ್ಯುತ್ತಮವಾಗಿತ್ತು. ತರಗತಿಯ ಏಕತಾನತೆಯನ್ನು ಹೋಗಲಾಡಿಸಲು ನಾನೇನಾದರೂ ನಗೆಮಾತು ಹೇಳಿದರೆ ಮಿಕ್ಕವರಿಗೆ ಹಾಸ್ಯದ ಅಂಶ ತಿಳಿಯುವ ಮೊದಲೇ ಅವಳಿಗೆ ಅದರ ಅಂತರಾರ್ಥ ಹೊಳೆಯುತ್ತಿತ್ತು. ತಕ್ಷಣ ಅವಳ ಮುಖ ಮಂದಹಾಸದಿಂದ ಬೆಳಗುತ್ತಿತ್ತು. ಇಂಥ ಚೂಟಿ ಹುಡುಗಿ ಮಾತಿಗೇಕೆ ದೂರ ಎಂದು ಯೋಚಿಸಿದೆ. ನೋಡಲು ಲಕ್ಷಣವಾಗಿದ್ದ ಆ ಹುಡುಗಿಯ ಹೆಸರು ಮಂಜುಭಾಷಿಣಿ ಎಂಬ ಅರ್ಥದ್ದು. ಇದು ಎಂತಹ ವಿಪರ್ಯಾಸ ಎಂದುಕೊಂಡೆ ನಾನು.

ಚಟುವಟಿಕೆಯ ಚಿಲುಮೆಗಳಂತಿರುವ ಮಿಕ್ಕ ಎಳೆಯರ ನಡುವೆ ಈ ಹುಡುಗಿಯ ಅಸಹಜ ಮೌನದ ಕಾರಣವನ್ನು ಅರಿಯುವ ಕುತೂಹಲದಿಂದ ಅವಳನ್ನು ಗಮನಿಸುತ್ತಿದ್ದೆ. ಕಾರಣ ತಿಳಿಯಲು ಕಷ್ಟವಾಗಲಿಲ್ಲ. ಅವಳಿಗೆ ಸ್ವಲ್ಪ ಉಗ್ಗು ಹದಿಹರೆಯದ ಹುಡುಗಿಯೊಬ್ಬಳಿಗೆ ಉಂಟಾಗುವ ಸಹಜ ಗೊಂದಲಗಳ ಜೊತೆಗೆ ಈ ಕಾರಣವೂ ಸೇರಿ ಅವಳು ಮಾನಸಿಕವಾಗಿ ಕುಗ್ಗಿ ಹೋಗಿದ್ದಳು. ಸಂಕೋಚದಿಂದ ತನ್ನಲ್ಲೇ ನರಳುತ್ತಿದ್ದಳು. ಅಕಸ್ಮಾತ್ ಅವಳು ಬಾಯಿಬಿಟ್ಟರೂ ಸುತ್ತ ಮುತ್ತ ಹರಡುತ್ತಿದ್ದ ಮುಸಿನಗೆಯ ಹೊಡೆತವನ್ನು ತಾಳುವ ಚೈತನ್ಯ ಅವಳಿಗಿರಲಿಲ್ಲ ಎಂಬುದನ್ನು ತಿಳಿದು ದುಃಖಪಟ್ಟೆ. ಮಿಕ್ಕವರನ್ನು ಗದರಿಸುವುದಕ್ಕಿಂತ ಅವಳಲ್ಲಿ ಆತ್ಮವಿಶ್ವಾಸವನ್ನು ಬೆಳೆಸುವುದೇ ಮೇಲೆಂದು ಭಾವಿಸಿದೆ.

ಅಂದಿನಿಂದ ತಲೆತಗ್ಗಿಸಿ ಹಾಜರಿ ಹಾಕಲು ಪ್ರಾರಂಭಿಸಿದೆ. ಕೇವಲ ಎದ್ದು ಕೂರುವ ಬದಲು ಬಾಯಿಬಿಟ್ಟು ಹಾಜರಿ ಹೇಳಬೇಕು ಎಂಬ ಅರಿವು ಅವಳಿಗೆ ಮೂಡುವಂತೆ ಮಾಡಿದೆ. ಅವಳು ಹಿಂಜರಿದರೂ ಬಿಡದೆ ಒಂದೋ ಎರಡೋ ಪದಗಳಲ್ಲಿ ಉತ್ತರಿಸಲು ಸಾಧ್ಯವಾಗುವ ಪ್ರಶ್ನೆಗಳನ್ನು ಹಾಕುತ್ತಿದ್ದೆ. ಆದರಿಂದಾಗಿ ಉಗ್ಗು ಸತಾಯಿಸಿಕೊಂಡರೂ ಅದನ್ನು ಗಮನಿಸದೆ ಮಧ್ಯದಲ್ಲಿಯೇ ಸಹಜವಾಗಿ ಎಂಬಂತೆ ಸಹಾಯ ಮಾಡುತ್ತಿದ್ದೆ.

ಸುಮಾರು ಒಂದೂವರೆ ವರ್ಷದ ನಂತರ ನಾನು ಬಯಸಿದ್ದ ಪರಿಣಾಮದ ಸ್ಪಷ್ಟ ಸೂಚನೆ ಕಂಡು ಬಂದಿತು. ತನ್ನ ಜೊತೆಯ ಕಿಶೋರಿಯರೊಂದಿಗೆ ಅವಳು ಹರಟೆ ಹೊಡೆಯುತ್ತಿದ್ದುದನ್ನು ಕಂಡೆ. ತರಗತಿಯಲ್ಲಿ ನಾನು ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರ ಹೇಳುವುದರಲ್ಲಿ ಅವಳಿಗೆ ಈಗ ಆಸಕ್ತಿಯಿತು. ಲೀಲಾಜಾಲವಾಗಿ ಅಲ್ಲದಿದ್ದರೂ ಮೊದಲಿನ ಹಿಂಜರಿಕೆಯಿರಲಿಲ್ಲ. ಆ ಹಂತದಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವ ಪುಸ್ತಕಗಳನ್ನು ಆರಿಸಿ ಅವಳಿಗೆ ಓದಲು ಕೊಟ್ಟೆ. ಮೊದಮೊದಲು ಪುಸ್ತಕವನ್ನು ಓದಿ ಮಾತಿಲ್ಲದೆ ಹಿಂದಿರುಗಿಸಿ ಹೋಗುತ್ತಿದ್ದವಳು, ಕೆಲವು ದಿನಗಳಲ್ಲಿ ತನ್ನ ಅಭಿಪ್ರಾಯವನ್ನು ಹೇಳಲು ಮೊದಲು ಮಾಡಿದಳು. ಅವಳ ಅಭಿಪ್ರಾಯ ಪ್ರತಿಬಾರಿಯೂ ಸರಿ ಎಂಬುದಕ್ಕಿಂತ ತಾನಾಗಿಯೇ ಹೇಳಿದಳು. ಎಂಬುದೇ ನನಗೆ ಹೆಚ್ಚಿನ ಸಂತೋಷ ನೀಡಿದ ಅಂಶ. ಪರೀಕ್ಷೆಯ ದಿನಗಳು ಸಮೀಪಿಸುವ ವೇಳೆಗೆ ಅವಳು ಬಹುಮಟ್ಟಿಗೆ ತನ್ನ ಇತರ ಸಹಪಾಠಿಗಳಂತೆ ಆಗಿಬಿಟ್ಟಿದ್ದಳು. ಅವಳ ಹೆಸರಿಗು ವ್ಯಕ್ತಿತ್ವಕ್ಕು ಇದ್ದ ಅಂತರ ಮರೆಯಾಗಿತ್ತು. ನಿರೀಕ್ಷಿಸಿದಂತೆ ಅವಳು ಪ್ರಥಮದರ್ಜೆಯಲ್ಲಿ ತೇರ್ಗಡೆ ಹೊಂದಿದಳು.

ಇತರರ ಸಹಾನುಭೂತಿ, ಮೆಚ್ಚುಗೆಗಳಿಂದ ಬೆಳೆಯುವ ಚೇತನಕ್ಕೆ ಎಂಥ ಪೋಷಣೆ ದೊರೆಯುತ್ತದೆ ಎಂಬುದನ್ನು ನನ್ನ ಸಫಲ ಪ್ರಯೋಗದಿಂದ ಅರಿತೆ. ಅಧ್ಯಾಪಕರು ಮನಸ್ಸು ಮಾಡಿದರೆ ಎಷ್ಟೋ ಮುಗ್ಧ ಮನಸ್ಸುಗಳು ಸಹಜವಾಗಿ ವಿಕಸಿಸುವಂತೆ ಮಾಡಬಹುದು, ಅಲ್ಲವೆ?

(ಮೈಸೂರು ಆಕಾಶವಾಣಿ ಸೌಜನ್ಯ)

# ನಾನು – ನನ್ನಂಥವರು

ಕಣ್ಣ ಕೊನೆಯಲ್ಲಿ ಕಸೂತಿ ಹೆಣೆಯುತ್ತ
ನಿಶ್ಚಿಂತ ನಾಳೆಗಾಗಿ
ನಿರೀಕ್ಷೆಯ ನೋಂಪಿಯಲಿ
ಕಾದು ಕುಳಿತಿದ್ದೇವೆ,
ಕಾದೊಲೆಯ ಹಂಚಾಗಿ;
ಈ ನೆಲದ ನಡುಕಕ್ಕೆ
ಮುಖವಾಗಿ;
ಕಣ್ಣೀರಿಗೆ ಕೊಂಳಾಗಿ.



ನಾವು
ತಿಂಗಳುಗಳ ಲೆಕ್ಕದಲಿ
ವರ್ಷವನ್ನಳೆಯುವವರು
ಗಳಿಗೆ ಗಳಿಗೆಗಳಲ್ಲೂ
ಬೆಳಗು ಬೈಗಿನ ಹಾಗೆ
ನಿಯತವಾದವರು

ಕತ್ತಲೆಯ ರೂಪದಲಿ
ಕನಸುಗಳ ದಸ್ತಾವೇಜು ನಡೆಸಿ
ಬೆಳ್ಳಿ ಮೂಡುವ ಮೊದಲೇ
ಮಣ್ಣು ಮಾಡುವವರು
ಹೊಸಿಲಲ್ಲಿ ಸಗಣಿ ಸಾರಿಸಿ
ತುಳಸಿಗೆ ದೀಪ ಬೆಳಗಿ
ನಾಗೊಂದಿಗೆಯ ಮೇಲಿಟ್ಟ
ಹಿಟ್ಟಿನ ಡಬರಿಯ ಹಾಗೆ
ತಟಸ್ಥರಾದವರು.

(ನಿಮ್ಮ ಅಸಂಖ್ಯ ಪದಕೋಶಗಳು
ನಿಮ್ಮಲ್ಲೇ ಇರಲಿ)
ನಾವು ಭಾವನೆಗಳಲ್ಲೇ ಬದುಕುವವರು

ಕನಸುಂಡು ಕರಗುವವರು
ಆದರೀಗ, ಗಾರು ಬಡೆದಿದ್ದೇವೆ.
ಒಂದೆಡೆ,
ಕಪ್ಪಾನ ಕಪ್ಪು ಕಾಗೆ ಕರ್ಫ್ಯೂ ರಸ್ತೆಯಲಿ
ಕಿರುಚುತ್ತಿದೆ
ಇನ್ನೊಂದೆಡೆ,
ಕರಿ ಕಲ್ಲಿಂದೆದ್ದ
ಅಹಲ್ಯೆಯ ಬಿಳಿಮುಡಿ
ಕಣ್ಣ ಚಿವುಟುತ್ತಿದೆ!

ವಿನಯಾ ಜಿ. ನಾಯಕ

## ಕಾರಣ

ಎಲ್ಲಿಂದಲೋ
ಬಂದು ಬಿದ್ದ ಬಿಸಿಲು
ಯಾರದೋ ಅಂಗಳದ ಟೊಂಗೆ
ಅಲ್ಲಾಡಿಸುತ್ತಾ ಬಂದ ಗಾಳಿ
ನೆರಳಿನುರುಳು ಮಾತ್ರ
ನನ್ನೆದೆಯ ಹಿತ್ತಿಲಲ್ಲಿ

ಯಾವುದೋ ಹೊಂಡದಲ್ಲಿ
ತಲ್ಲಣಿಸುತ್ತ ಬಿದ್ದ ಸಾಗರ
ಮೆಲ್ಲ ಮೆಲ್ಲನೆತ್ತಿ
ಆಕಾರ ಕೊಟ್ಟ ಸೂರ್ಯ
– ತಾಪಕ್ಕೆ ಬೀಸಿ
ಮೋಳೆ ಹೊಡೆವ ಮಾರುತ
– ದ ಕೋಲಾಹಲ ಮಾತ್ರ
ಸಿಡುಳ ಬಯಲಲ್ಲಿ.

ಹೆಸರಿಲ್ಲದೊಂದು ಕಾಡು
ತನ್ನೊಳಗೇ ಮಾಸಿ ಮಸಿದು
ಹಚ್ಚಿಟ್ಟ ಕಿಚ್ಚು
ಹಬ್ಬುತ್ತ ತಬ್ಬುತ್ತ
ಹುಲ್ಲು ಗರಿಕೆಗಳು
ಧಗಧಗಿಸುವೆಚ್ಚರ ಮಾತ್ರ
ತಲೆ ಬಣಿವೆಯಲ್ಲಿ.

ಕಾಣದ ಕೈ
– ವಾಡಕ್ಕೆ ಮುಖವೊಡ್ಡಿ
ಮೈಯೊಡ್ಡಿ ನಿಂತ ನಾನು ಇಲ್ಲಿ
ಈ ಸಣ್ಣ ಕುರುಡು ಕ್ಷಣಗಳಲ್ಲಿ.

ಭಾಗಿರಥಿ ಹೆಗಡೆ.

## ಕನ್ನಡಿ

ಯಾರ ಕಟ್ಟ ಕಣ್ಣೋ ತಾಕದೆ
ಗುಟ್ಟಾಗಿ ಬಳಸಿದ್ದ
ಕನ್ನಡಿ
ನನ್ನ ಪ್ರೀತಿಯ ಕನ್ನಡಿ
ಬಿದ್ದು ಚೂರಾಯಿತೇಕೆ ?
ಹೇಳೆನ್ನ ಗೆಳತಿ
ನನ್ನಾಣೆ ಹೇಳೆ ?
ಯಾವ ದುಷ್ಟ ಕೈ
ನನ್ನೆದೆಯ ಪದಕವ ಕದ್ದು
ಕಲ್ಲುನೆಲಕ್ಕೆ ಮಧ್ಯಕ್ಕೆ
ಅಪ್ಪಳಿಸಿತೇಕೆ ?
ಹೇಳೆನ್ನ ಗೆಳತಿ
ನನ್ನಾಣೆ ಹೇಳೆ ?

ಶಕುಂತಲಾ ಎಸ್.
ಕಾಡುಗೋಡಿ

## ಹೆಣ್ಣು

ಓ ಹೆಣ್ಣೆ ಗೋಮುಖ ವ್ಯಾಘ್ರದಿಂದ
ವಂಚಿತಳಾಗಿ............!
ನೋವಿನ ಸಂಸಾರದ ಜಂಜಾಟದಲ್ಲಿ
ಸಿಲುಕಿರುವೆ.........
ಸಕಲ ಸಂಕಷ್ಟದಲ್ಲಿ ಬೆಂದಿರುವೆ
ಪತಿಗಾಗಿ ಬಳಲುತ್ತಿರುವ
" ಶಿರೋಮಣಿ "

ಏನೆಂದು ಬಣ್ಣಿಸಲೇ ರಮಣಿ?
ಕರುಣೆ ಬತ್ತದ ಕಾರಂಜಿಯಾಗಿ
ಕಂಡಿಹೆನು ನಿನ್ನ ಬಿಂಬ
ಭಿನ್ನ ......ವಿಭಿನ್ನ
ಇಂತಿರಲು,
ನಾ ಎಂತು ಬಣ್ಣಿಸಲಿ
ನಿನ್ನ ನೈಜ್ಯ ಬಣ್ಣ !

ಗೀತ. ಪಿ.

ಕೊಂಡಂಥ ಬಾಲಕಿಯರಿಗೆ, ಕೀಳರಿಮೆ, ಆತ್ಮವಿಶ್ವಾಸವಿಲ್ಲದವರಿಗೆ ಮಾನಸಿಕ ಚಿಕಿತ್ಸೆ ನೀಡಿ, ಅವರ ದೌರ್ಬಲ್ಯವನ್ನು ಶಿಕ್ಷಕರು ಹೋಗಲಾಡಿಸಬಹುದು. ವಿಷಯಗಳನ್ನು ಆರಿಸಿಕೊಳ್ಳುವಾಗ, ಔದ್ಯೋಗಿಕ ಮಾರ್ಗದರ್ಶನ ನೀಡುವಲ್ಲಾಗಲಿ, ಅಥವಾ ಶಿಕ್ಷಣ ಸಂಸ್ಥೆಗಳ ಸಾಂಸ್ಕೃತಿಕ ಚಟುವಟಿಕೆಗಳ ಸಂದರ್ಭಗಳಲ್ಲಾಗಲಿ ಬಾಲಿಕೆಯರಿಗೆ ಅನ್ಯಾಯ ಮಾಡಬಾರದು. ಮಕ್ಕಳ ಸಾಹಿತ್ಯದಲ್ಲೂ ಬದಲಾವಣೆಯ ಅಗತ್ಯವಿದೆ. ಲಿಂಗ ಭೇದವಿಲ್ಲದ, ಯಾವುದೇ ಅಸಮಾನತೆ ಸೃಷ್ಟಿಸದಂತಹ ಪ್ರಾಸಬದ್ಧ ಪದಗಳ, ಮನಸೆಳೆವ ಕಥೆಗಳ ಸಂಖ್ಯೆ ಹೆಚ್ಚಿಸಬೇಕು. ಬಾಲೆಯರಿಗೆ ಬೆಳವಣಿಗೆಯ ಅವಕಾಶ ನೀಡುವಂಥ "ಮಾದರಿ" ಪಾತ್ರಗಳ ಸಾಹಿತ್ಯದ ರಚನೆಯಾಗಬೇಕು.

ಕಡೆಯದಾಗಿ ಭಾರತದಂತಹ ದೇಶಗಳಲ್ಲಿ ಜಾರಿಗೆ ತರುವ ಅಭಿವೃದ್ಧಿ ಕಾರ್ಯಗಳಲ್ಲಿ ಲಿಂಗ ಹಾಗೂ ವರ್ಗಬೇಧಗಳಿರುತ್ತವೆ. ಯೋಜನೆಗಳೂ ಹಾಗೆಯೇ ಇರುತ್ತವೆ. ಅತಿ ಕೆಳಮಟ್ಟದಲ್ಲಿ ದುಡಿಮೆಯಾಳು ಹೆಣ್ಣಾದರೆ, ಆ ಕೆಲಸದ ಮೇಲ್ವಿಚಾರಣೆ ಅದಕ್ಕೆ ಬೇಕಾಗುವ ಟ್ರೈನಿಂಗ್ ಒಡೆತನ, ಪರವಾನಗಿ ಎಲ್ಲ ಪುರುಷನಿಗೆ. ಅಂತಿಮವಾಗಿ ಹಣವೂ ಆತನಿಗೇ. ಉದಾ: ಪ್ರಾಣಿಗಳ ಸಾಕಣೆಯಲ್ಲಿ ಹೆಂಗಸರೇ ಎಲ್ಲ ನಿರ್ವಹಿಸಿದರೂ ಅದಕ್ಕೆ ಬೇಕಾದ ತರಬೇತಿ ನೀಡುವುದು ಪುರುಷರಿಗೆ. ಅದೇ ಸ್ತ್ರೀಯರಿಗೇ ನೇರವಾಗಿ ಆ ತರಬೇತಿ ನೀಡಿದರೆ? ಸಾಲ ಸೌಲಭ್ಯಗಳೂ ಇದರಿಂದ ಹೊರತಲ್ಲ, ಗಂಡಸರಿಗೆ ನೀಡುವುದಕ್ಕಿಂತಲೂ ಹೆಂಗಸರಿಗೆ ನೀಡುವ ಸಾಲದ ಹಣ ವಾಪಸು ಬಡ್ಡಿ ಸಮೇತ ಬರುತ್ತವೆ ಎಂದು ಅಧಿಕಾರಿಗಳು ಹೇಳುತ್ತಾರೆ ಬರುವ ಆದಾಯವೂ ಸ್ತ್ರೀಯರ ಕೈಗೆ ಹೋದರೆ ಆ ಹಣ ಪೋಲಾಗದೆ ಸಂಪೂರ್ಣವಾಗಿ ಕುಟುಂಬಕ್ಕೇ ವಿನಿಯೋಗವಾಗುತ್ತದೆ ಎಂಬುದಂತೂ ಎಲ್ಲರಿಗೂ ಗೊತ್ತಿರುವ ಸತ್ಯ. ಆದ್ದರಿಂದ ಸ್ತ್ರೀಯರ ಆರ್ಥಿಕ ಸ್ವಾವಲಂಬನೆಗೆ ಹೆಚ್ಚು ಪ್ರಾಮುಖ್ಯತೆ ದೊರೆಯಬೇಕು. ಅವರೀಗ ತಪ್ಪು ಅಭಿವೃದ್ಧಿಯ ಯೋಜನೆಗಳಲ್ಲೇ ಇರುವುದರಿಂದ ಸ್ತ್ರೀಯರ ಕಲ್ಯಾಣಕ್ಕಾಗಿಯೇ ಒಂದು ಇಲಾಖೆ ಇದ್ದರೂ ಎಲ್ಲ ಕ್ಷೇತ್ರಗಳಲ್ಲೂ ಮಹಿಳೆ ಸಾರಾಸಗಟಾಗಿ ಕಡೆಗಣಿಸಲ್ಪಟ್ಟಿದ್ದಾಳೆ. "ಸ್ತ್ರೀಯರ", "ಬಾಲಿಕೆ" ಯರ ಅಭಿವೃದ್ಧಿಯ ಬಗ್ಗೆ ಪ್ರಜ್ಞೆ ಮೂಡುತ್ತಿರುವ ಈ ದಿನಗಳಲ್ಲಾದರೂ ಸರ್ಕಾರ ಪ್ರಗತಿಪರ ಕಾರ್ಯಗಳನ್ನು ಜಾರಿಗೆ ತರುವಂತೆ ಸ್ತ್ರೀ ಸಂಘಟನೆಗಳು ಜವಾಬ್ದಾರಿಯುಳ್ಳ ಪ್ರತಿಯೊಬ್ಬರೂ ಯತ್ನಿಸಬೇಕು.


ಆಧಾರ: "ವಿಮೆನ್ ಇನ್ ಮಾಸ್ ಮೀಡಿಯಾ"

"ಮೆಸೇಜಸ್ ಫಾರ್ ಎಜುಕೇಶನ್ ಅಂಡ್ ಡೆವಲಪ್‌ಮೆಂಟ್ ಆಫ್ ಗರ್ಲ್ಸ್ ಥ್ರೂ ಮಾಸ್ ಮೀಡಿಯಾ ಇನ್ ದಿ ಫಾರಂ ಆಫ್ ಕ್ಯಾಚಿ ಫ್ರೇಸಸ್ ಅಂಡ್ ಸ್ಲೋಗನ್ಸ್"

"ದಿ ಗರ್ಲ್ ಚೈಲ್ಡ್ ಅಂಡ್ ರೋಲ್ ಆಫ್ ಮೀಡಿಯಾ ಅಂಡ್ ಕಮ್ಯೂನಿಕೇಶನ್"

"ಸೆಕ್ಸಿಸಂ ಇನ್ ಟೆಕ್ಸ್ಟ್ ಬುಕ್ ಅಂಡ್ ಅದರ್ ರೀಡಿಂಗ್ ಮೆಟೀರಿಯಲ್"


0 0 0

## ಕಳೆದು ಹೋಗುತ್ತಿದ್ದೇನೆ.

ದೊಡ್ಡ ಅಂಗಳದಲ್ಲಿ,
ಮನದ ಚಿತ್ತಾರಗಳ ಹೆಣೆದು
ಎಳೆ ಎಳೆ ರಂಗವಲ್ಲಿ ಬಿಡಿಸಿ
ಬಗೆ ಬಗೆ ಬಣ್ಣ ತುಂಬಲಾರದೆ
ಸೋತು ಹೋಗುತ್ತಿದ್ದೇನೆ.

ಅಡಿಗೆ ಮನೆಯಲ್ಲಿ,
ದಡಬಡ ಪಾತ್ರೆಗಳ ನಡುವೆ
ಬಿಸಿ ಬಿಸಿ ಅಡಿಗೆ ತಯಾರಿಸಿ
ತುಂಬು ಕುಟುಂಬದ ವೈವಿಧ್ಯತೆಗೆ
ಉಪ್ಪು ಹಾಕುವ ಭರಾಟೆಯಲ್ಲಿ
ನನ್ನ ರುಚಿ ಎಲ್ಲೋ ಮರೆತುಹೋಗಿ
ಕರಗಿಹೋಗುತ್ತಿದ್ದೇನೆ.

ಈ ಸಂಬಂಧಗಳು,
ಮುಳ್ಳು ಬೇಲಿಗೆ ಹಾಕಿದ ಬಟ್ಟೆಯಂತೆ.
ಈರ್ಷೆ, ಅಸೂಯೆ, ಅಸಹನೆಗಳಿಗೆ
ಬಡಿವಾರದ ಮುಖವಾಡ ಹೊದ್ದ ತೆರೆಗಳು
ಕಳಚಲಾರದ ಕೊಂಡಿಗಳಲ್ಲಿ
ಬೆಲೆಯಿಲ್ಲದ ನೆಲೆಯಲ್ಲಿ
ಸರಳ ಸಂಬಂಧಗಳ ಹುಡುಕ ಬಯಸಿ
ನನ್ನಂತರಂಗದಲ್ಲಿ ನಾನೆ ನಿಗೂಢಳಾಗಿ
ಮರೀಚಿಕೆಯಾಗುವ ಕನಸುಗಳ ಸೌಧದಲ್ಲಿ
ಕಳೆದು ಹೋಗುತ್ತಿದ್ದೇನೆ.

ಪ್ರೇಮಾವತಿ.

# ಓದುಗರ ಅಂಕಣ

ಪತ್ರಿಕೆ ವೈಯಕ್ತಿಕವಾಗಿ ನಮಗೆ ಉಪಯುಕ್ತ ಎನಿಸಿದೆ. ಆದರೆ ಅದು ಸಾರ್ವಜನಿಕವಾಗಬೇಕು. ಸ್ತ್ರೀಯರ ಬದುಕಿನ ಧ್ವನಿಯನ್ನು "ಮಾನಸ" ಧ್ವನಿಸುತ್ತಿದೆ ಎನ್ನುವುದಕ್ಕಿಂತಲೂ ಪಿಸುಗುಡುತ್ತಿದೆ ಎನ್ನಬಹುದು. "ಮಾನಸ" ದಲ್ಲಿ ಅನುವಾದದ ಲೇಖನ ಪ್ರಕಟಿಸುವುದಕ್ಕಿಂತ, ಗ್ರಾಮೀಣ ಸ್ತ್ರೀಯರ ಸಮಸ್ಯೆಗಳ ಬಗ್ಗೆ ಮಹಿಳೆಯರ ಆರೋಗ್ಯ, ಪಟ್ಟಣದಲ್ಲಿ ದುಡಿಯುತ್ತಿರುವವರ ಕುರಿತು, ಮಹಿಳಾ ಕೈಗಾರಿಕೆಗಳ ಬಗ್ಗೆ ಅರಿವು ಮೂಡುವಂತೆ ಚಿಕ್ಕ ಅಂಕಣಗಳಾದರೂ ಸಾಕು ಹೆಚ್ಚಿನ ಜನರನ್ನು ತಲುಪಲು ಸಹಾಯಕವಾಗಬಹುದು ಎಂದು ನನ್ನ ಅನಿಸಿಕೆ. ಪತ್ರಿಕೆಯನ್ನು ಉತ್ತಮಪಡಿಸಲು ಜನರಲ್ಲಿ ಆಸಕ್ತಿ ಮೂಡುವಂತಹ ಕೆಲವು ಅಂಕಣಗಳು ಅವಶ್ಯಕವಲ್ಲವೆ?

ಕೆ. ಮಹಾಲಿಂಗಮ್ಮ

"ಮಾನಸ" ಪತ್ರಿಕೆ ವೈಯಕ್ತಿಕವಾಗಿ ನನಗೆ ಬಹಳ ಉಪಯುಕ್ತವೆನಿಸಿದೆ. ಮಾನಸದಲ್ಲಿ ಪ್ರಕಟವಾದ ಅನೇಕ ಲೇಖನಗಳಿಂದ ವೈಯಕ್ತಿಕವಾಗಿ ನಾನು ಬಹಳ ಪ್ರಭಾವಿತಳಾಗಿದ್ದೇನೆ. ಮಾನಸ ನೀಡುವ ಕೆಲವು ಮಹಿಳೆಯರ ಹೋರಾಟದ ಬದುಕಿನ ಚಿತ್ರಣ, ಕಾರ್ಖಾನೆಗಳಲ್ಲಿ, ವಿವಿಧ ಫರ್ಮ್‌ಗಳಲ್ಲಿ ದುಡಿದು, ಹೋರಾಡಿ ತಮ್ಮ ಅಸ್ತಿತ್ವವನ್ನು ಳಿಸಿಕೊಂಡ ಮಹಿಳೆಯರ ಕುರಿತು ತಿಳಿದು ರೋಮಾಂಚನವಾಯಿತು. ಮಂಗಳೂರಿನ ಕೆಲವು ಮಹಿಳಾ ವೇದಿಕೆಗಳಲ್ಲಿ ನಾನು ಈ ಕುರಿತು ಪ್ರಸ್ತಾಪಿಸುವಲ್ಲಿ ನನಗೆ ಈ ಮಾಹಿತಿಗಳಿಂದ ಬಹಳ ಸಹಾಯವಾಯಿತು. ಈ ನಿಟ್ಟಿನಲ್ಲಿ ಮಾನಸ ಸ್ತ್ರೀಯರ ಧ್ವನಿಯನ್ನು ಖಂಡಿತಾ ಧ್ವನಿಸುತ್ತಿದೆ ಎಂಬುದರಲ್ಲಿ ಸಂಶಯವೇ ಇಲ್ಲ. ಇದೇ ರೀತಿ ಇನ್ನೂ ಹೆಚ್ಚು ಹೆಚ್ಚು ಲೇಖನಗಳನ್ನು ಹೊರತರುವುದರ ಮೂಲಕ ಈ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಲು ನೀವು ಪ್ರಯತ್ನಿಸಬಹುದು. ಮಾನಸ ಈ ಕೆಲಸ ಮಾಡಬೇಕಾದರೆ ಅದಕ್ಕೆ ಓದುಗರಿಂದ ಇನ್ನೂ ಹೆಚ್ಚಿನ ಸಹಕಾರ ದೊರೆಯಬೇಕು. ಭಾರತದ ಉದ್ದಗಲಕ್ಕೂ ಸಂಚರಿಸಿ ವಿವಿಧ ರಾಜ್ಯಗಳಲ್ಲಿ ಕಂಡುಬರುವ ವಿವಿಧ ಬಗೆಯ ಮಹಿಳಾ ಸಮಸ್ಯೆಗಳ ಕುರಿತು ಅಧ್ಯಯನ ನಡೆಸಿ ಆ ಬಗ್ಗೆ ವಿವರವಾದ ಲೇಖನಗಳನ್ನು ಬರೆದು ಮಾನಸದಲ್ಲಿ ಪ್ರಕಟಿಸಬೇಕು. ಪ್ರತ್ಯಕ್ಷವಾಗಿ ಅಲ್ಲಲ್ಲಿಗೇ ಹೋಗಿ ಈ ರೀತಿ ಅಧ್ಯಯನ ಮಾಡುವುದರಿಂದ ಸಮಸ್ಯೆಯ ಸರಿಯಾದ ಪರಿಚಯ, ಅದರ ಸಾಧಕ — ಬಾಧಕಗಳು ನಮಗೆ ತಿಳಿಯುವಂತಾಗುತ್ತದೆ. ಈ ನಿಟ್ಟಿನಲ್ಲಿ ಶ್ರಮಿಸಲು "ಮಾನಸ" ಸಿದ್ಧವಾಗಲಿ; ಅದಕ್ಕೆ ಅಗತ್ಯದ ಎಲ್ಲವೂ ಪತ್ರಿಕೆಗೆ ದೊರೆಯಲೆಂದು ಆಶಿಸುತ್ತೇನೆ.

ಜಲಜಾಕ್ಷಿ ಕೆ. ವಿ.
ಅಧ್ಯಕ್ಷೆ, 'ಕರಾವಳಿ' ಲೇಖಕಿಯರ, ವಾಚಕಿಯರ ಸಂಘ
(ದ.ಕ. ಮತ್ತು ಕಾಸರಗೋಡು) ಮಂಗಳೂರು.

---

## ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ **ತಕ್ಷಣ 20-00 ರೂ** ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

---

## ನಿನಗೆ!

ಕತ್ತಲ ಯಾತ್ರಿಕನೇ!
ಕಣ್ಣದೀವಿಗೆ ಹಿಡಿದೆತ್ತ ಹೊರಟೆ?
ನನ್ನಂಗಳದಲ್ಲೀಗ ಚೈತ್ರ ಹಾಡುತ್ತಿದೆ
ಸೋನೆ ಮಳೆ ತುದಿತಕ್ಕೆ

ನೆಲತಾಯ ಬಸಿರು ಹಸಿರ ಹಡೆದಿದೆ ನೋಡು,
ಕಾಲ ಉರುಳುತ್ತಿದೆ ನನ್ನ ನಿನ್ನೆದುರೇ,
ಕಣ್ಣ ಕಿಟಕಿಯಿಂದೆನ್ನ ಒಮ್ಮೆ ದಿಟ್ಟಿಸಿನೋಡು,
ನನ್ನೊಡಲಲ್ಲಿ ಕಿಡಿಕಾರುವ ಗುಲ್‌ಮೊಹರು

ನಿಲ್ಲು,

ನಿಲ್ಲು ಬಂಡಿ ಪಯಣಿಗನೆ.
ಇಂದು ನಾಳೆಗೆ ನೋವ ನೀಡುವ ನೆನಪಾಗದಿರಲಿ
ಕುದಿವ ಬಯಕೆ ಕುದುರೆಗೆ ಕಡಿವಾಣ ಬೇಕಿದೆ.
ಸಕ್ಕರೆ ಕನಸೊಂದು ಸಾಕೆನಗೆ,
ನಿನ್ನ ಬೆಚ್ಚನ್ನ ಅಪ್ಪುಗೆಯೊಳಗೆ.

ರಾಧಾ ಕಿನಾಲ್

## ತಡೆಯಲಾರೆ

ನನ್ನ ಗುಡಿಸಲಿನೆದುರು
ಎಳೆಯಬೇಡ ಗೆರೆಗಳನು
ನಿನ್ನ ಗೆರೆಗಳೇನೂ
ಉಳಿಸಲಿಲ್ಲವಲ್ಲ ಸೀತೆಯರನು
ದುಷ್ಟ ರಾವಣರು
ವಿಧಿಸಿದ ಸೆರೆವಾಸಗಳನು
ತಡೆಯಲಿಲ್ಲ ಅಗ್ನಿಪರೀಕ್ಷೆಗಳನು
ಸಾಕು ಮಾಡಿನ್ನು
ಪವಿತ್ರತೆಯ ಪುರಾಣಗಳನ್ನು
ನಾನು ಕಿತ್ತೊಗೆದಿದ್ದೇನೆ.
ಪುನಿತೆಯರ ಸೋಗುಗಳನ್ನು
ಕೆದಕಿದ್ದೇನೆ ಇತಿಹಾಸವನ್ನು
ಕಂಡಿದ್ದೇನೆ ಚನ್ನಮ್ಮ
ಝಾಂಸಿಯರ ವೀರಗಾದೆಗಳನ್ನು
ಹಿರಿದಿದ್ದೇನೆ ಕತ್ತಿಯನು
ಪರಿಣಾಮವನ್ನೆದುರಿಸಲು ಬಿಡು
ಇನ್ನು ತಡೆಯಲಾರೆ
ಗೆರೆಗಳನ್ನೆಳೆದು ನನ್ನನು

ಉಜ್ವಲಾ ಪುಣಜಗೌಡ

# ಕದ ಮುಚ್ಚಿದ ಹಾದಿ

ಕದ ಮುಚ್ಚಿದ ಹಾದಿ ನಿಡಿದಾಗಿದೆ
ದುತ್ತನೆದುರಾಗುತ್ತವೆ ಬಿರುಕು ಬಿಟ್ಟ ಗೋಡೆಗಳು
ಲಕ್ವ ಹೊಡೆದ ಭಾವನೆಗಳು
ಕಂದಿದ ಕನಸುಗಳು ಕನವರಿಸುತ್ತವೆ ಇರುಳಗಣ್ಣನಲ್ಲಿ

ಹಾದಿಗುಂಟ ಹೆಕ್ಕಿ ಮಡಿಲಲ್ಲಿಟ್ಟುಕೊಂಡ
ಗಾಳಿಗಿಂತ ಹಗುರಾದ ಹೂಗಳು
ಯಾವ ಮಾಯದಲ್ಲಿ ಕಲ್ಲಾಗಿ ಬಿಟ್ಟವು

ಅಂದು

ಕರಕಲಾದ ಹಿತ್ತಾಳೆಯ ಪಾತ್ರೆಯ ಅಂಡುಗಳಲ್ಲಿ
ಚಾಚಿದ ಸೌದೆಗಳಲ್ಲಿ
ಹೊಗೆ ಮುತ್ತಿ ನೀರು ತುಂಬಿದ ಕಣ್ಣುಗಳಲ್ಲಿ
ನಿಗಿ ನಿಗಿ ಉರಿಯುವ ಬೆಂಕಿಯಲ್ಲಿ
ಎಲ್ಲರೂ ಉಂಡೆದ್ದ ಗಂಗಾಳಿಗಳಲ್ಲಿ
ಬಿಕ್ಕಿದ ಬಿಕ್ಕುಗಳು
ಲೆಕ್ಕವಿಡದ ನಿಟ್ಟುಸಿರು
ಜೀವಂತವಾಗಿ ಉಸಿರಾಡುತ್ತಿವೆ ಇಂದು
ಲಕ್ಷ ಲಕ್ಷ ಪ್ರತಿಬಿಂಬಗಳು
ಒಡೆದ ಕನ್ನಡಿ ಚೂರುಗಳಲ್ಲಿ
ಎಂತೆಂಥ ಬಗೆಯ ಬಣ್ಣಗಳು ಕಣ್ಣ ಅಂಚಿನಲ್ಲಿ
ಸವೆಸಿದ ಹಾದಿ ಕಿತ್ತಿಟ್ಟ ಹೆಜ್ಜೆಯ ಗುರುತುಗಳ
ನೆನಪಿನೊಂದಿಗೆ ಮಾತ್ರ ಬದುಕಲುಂಟೆ?
ಹುಡುಕಿ ತೆಗೆಯಬೇಕಾಗಿದೆ ಕಡಲ ತಳದಲ್ಲಿ ಹುದುಗಿರುವ
ಕನಸುಗಳ

ಅಡವಿಟ್ಟ ಮೀಸಲ ಬದುಕ ಬಿಡಿಸಿಕೊಳ್ಳಬೇಕಿದೆ
ಆಕಾಶದುದ್ದಕ್ಕೂ ಹರಿದು ಹಂಚಿ
ಚಿಂದಿಯಾದ ಬದುಕ ಜೋಡಿಸಿ ಹೊಲಿಯಬೇಕಾಗಿದೆ
ಒಳಗಿರದ ಹೊರಗಿರುವ ನಾಜೂಕಿನ ನಗೆಯ ಬಗೆಯ
ಬಿಡಿಸಿ
ನಮ್ಮೊಳಗಿನ ನಮ್ಮದೆಯ ಉಸಿರ ಉಸಿರಾಡ
ಬೇಕಾಗಿದೆ.

ರಾಜೇಶ್ವರಿ ಎಚ್. ಎಸ್.

# ಹೆಣ್ಣು ಶಿಶುವಿನ ಬಗ್ಗೆ ಹೊಸದೃಷ್ಟಿ

೧೯೯೦ ರ ಡಿಸೆಂಬರ್‌ನಲ್ಲಿ ಹೆಣ್ಣು ಮಗುವಿನ ವರ್ಷದ ನೆನಪಿಗಾಗಿ ಎಂಬಂತೆ ಕರ್ನಾಟಕದಾದ್ಯಂತ ಹಲವಾರು ಕಾರ್ಯಕ್ರಮಗಳು ಜರುಗಿದವು. ಇಂತಹ ಒಂದು ಕಾರ್ಯಕ್ರಮ ಯೂನಿಸೆಫ್, ಮಹಿಳಾ ಮತ್ತು ಮಕ್ಕಳ ಕಲ್ಯಾಣ ನಿರ್ದೇಶನಾಲಯ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ ಕೇಂದ್ರ ಮೈಸೂರಿನಲ್ಲಿ ನಡೆಸಿದ ಮೂರು ದಿನದ ಶಿಬಿರದಲ್ಲಿ ನಡೆಯಿತು. ಹೆಣ್ಣು ಮಗುವಿನ ಬಗ್ಗೆ ಹೊಸ ದೃಷ್ಟಿಕೋನ ಮೂಡಿಸುವ ಆಶಯ ಹೊಂದಿದ ಶಿಬಿರ ಬಹಳಷ್ಟು ಆತ್ಮೀಯ ವಾತಾವರಣವನ್ನು ಭಾಗಿಗಳ ಮಧ್ಯೆ ಸೃಷ್ಟಿಸಲು ಪ್ರಯತ್ನಿಸಿತು. ಹೆಣ್ಣು ಮಗುವಿನ ಸೃಷ್ಟ್ಯಾತ್ಮಕವಾದ ಬದುಕಿನ ನೆಲೆಗಳಲ್ಲಿ ಭರವಸೆ ಹುಟ್ಟಿಸುವಂತಹ ಸೃಜನಾತ್ಮಕ ಕವನ, ಕಲೆ, ನಾಟಕ, ಹಾಡು ಚಿತ್ರ, ಘೋಷಣೆ ಇತ್ಯಾದಿಗಳು ಅಗತ್ಯವೆಂದು ಕಾರ್ಯಗಾರದ ಕಾರ್ಯನಿರ್ವಾಹಕರು ವ್ಯಕ್ತಪಡಿಸಿದ ಅಭಿಲಾಷೆ ಮೂರು ದಿನದ ಕಾರ್ಯಾಗಾರದಲ್ಲಿ ಬಹಳಷ್ಟು ಮಟ್ಟಿಗೆ ವಿಫಲವಾದಂತೆ ಕಂಡು ಬಂದಿತು. ಅನೇಕ ಸೃಜನಾತ್ಮಕ, ಕಲಾತ್ಮಕ ರಚನೆಗಳು ಈ ಕಾರ್ಯಗಾರದಲ್ಲಿ ರಚಿತವಾದವು. ಈ ರೀತಿಯ ಕಾರ್ಯಕ್ರಮಗಳು ಮಹಿಳೆಯರ ಸಾಮಾಜಿಕ ಚಟುವಟಿಕೆಗಳನ್ನು ಬಲಗೊಳಿಸುವಲ್ಲಿ ಹೆಚ್ಚು ಮಹತ್ತರ ಪಾತ್ರ ವಹಿಸುತ್ತಾವಲ್ಲದೆ ಸಾಂಸ್ಕೃತಿಕವಾಗಿಯೂ ತಮ್ಮದೇ ಆದ ನೆಲೆಗಟ್ಟಿನ ಮೇಲೆ ನಿಲ್ಲಲು ಪ್ರಯತ್ನಿಸುವ ಭರವಸೆಯನ್ನು ಸ್ತ್ರೀಯರಲ್ಲಿ ಮೂಡಿಸುವುದರಲ್ಲಿ ಸಂಶಯವಿಲ್ಲ.

ಈ ಕಾರ್ಯಗಾರದಲ್ಲಿ "ಮಾನಸ" ಒಳಗಡಿಂದ ರಚಿಸಲ್ಪಟ್ಟ ಬೀದಿ ನಾಟಕ:–

(8 ರಿಂದ 12 ವರ್ಷದ ಹುಡುಗಿಯರು ಹಪ್ಪಳ ಹೊಸೆಯುವ, ಊದುಬತ್ತಿ ಉಜ್ಜುವ, ಬೀಡಿಕಟ್ಟುವ, ಮಗು ಆಡಿಸುವ, ಚಪ್ಪಲಿ ಬಾರ್ ಕತ್ತರಿಸುವ, ಅಡಿಕೆ ಸುಲಿಯುವ, ಮನೆ ಕೆಲಸ ಮಾಡುವ ಮೈಮ್ (ಅಭಿನಯ) ಮಾಡುತ್ತಿರುತ್ತಾರೆ.)

(ಹಿನ್ನೆಲೆಯಲ್ಲಿ ಹಾಡು:–)

ಆಡೋ ಬಾಲೆಯರು ಗಾಣದೆತ್ತಿನಂತೆ
ಸುತ್ತಿ ಸುಳಿವರಮ್ಮಾ!
ಬದುಕ ದೋಣಿಯು ಮುಂದೆ ಸಾಗದೆ
ದಡವ ಮುಟ್ಟದಮ್ಮಾ॥
ಪುಟ್ಟ ಕೈಗಳು ಬೆಂದುಹೋದವು
ಬಾಳ ಬೇಗೆಯಲ್ಲಿ!
ಅರಳು ಮನಸುಗಳು ಘಾಸಿಗೊಂಡವು
ಬದುಕ ಬವಣೆಯಲ್ಲಿ॥

ನಿರೂಪಕ:– ಅಲ್ಲ, ಈ ಮಕ್ಳು ಇಷ್ಟೊಂದು ನಾಜೂಕಾಗಿ ಈ ವಯಸ್ಸಿನಲ್ಲಿ ಕೆಲಸ ಮಾಡ್ತಾ ಇದಾವಲ್ಲ ಅರೆ ನೀವೇ ನೋಡಿ ಸ್ವಾಮಿ! ಆಗ ಆ ಹುಡ್ಗಿ ಅಲ್ಲಿ ಎಷ್ಟು ನಾಜೂಕಾಗಿ ಆ ಹಪ್ಪಳ ಲಟ್ಸಿಸ್ತಾಳೆ, ಅರೆ! ಇಲ್ಲಿ ನೋಡಿ ಸ್ವಾಮಿ, ಈ ಮಗು ಎಷ್ಟು ಚುರುಕಾಗಿ, ನೀಟಾಗಿ ಬೀಡಿ ಕಟ್ತಾ ಇದೆ! ಅಯ್ಯೋ! ಅದೇನ್ನ ಬಿಡಿ ಅಂತೀರಾ, ಇಲ್ನೋಡಿ ಈ ಮಗು ಕೈಲಿ ಬೊಬ್ಬೆ! ಅಬ್ಬಾ, ಆದ್ರೂನೂ ಕಣ್ಣು ಬಿಟ್ಕೊಂಡು ಬಾರ್ ಕತ್ತರಿಸ್ತಾ ಇದೆ! ಹೋ! ಏನ್ ಇನ್ನು ಮಗು ಆಡೋಸ್ದೂ ಮನೆಗೆಲಸ ಮಾಡೋದೂ ಸಾಮಾನ್ಯ ಅಂತೀರಾ ಸ್ವಾಮಿ! ಅಂತೂ ಏನೇ ಆಗಲಿ, ನಂ ದೇಶದುದ್ಧಾರಕ್ಕೆ ಈಗ್ಲಿಂದಾನೇ ಕಷ್ಟಪಡ್ತಾ ಇದಾರೆ ಈ ಮಕ್ಕೆಲ್ಲ

ಅಯ್ಯೋ ಪಾಪ! ಏನೋ ಮಾತಾಡ್ತಾ ಇದ್ರೆ, ಕೇಳೋಣ ಅಲ್ವಾ?

1 ನೇ ಮಗು:– ಅಮ್ಮ! ನನ್ಗೆ ಈ ಕೈಯೆಲ್ಲ ನೋವು ನಮ್ಮಪ್ಪಂಗೆ ಇನ್ನೂ ಹಪ್ಪಳ ಲಟ್ಸಬೇಕಂತೆ. ದುಡ್ಡು ಸಾಲಲ್ವಂತೆ ಯಾರವ್ಮಾ ಲಟ್ಸಿಸ್ತಾರೆ, ಯಾವಾಗ್ಲೂ ಲಟ್ಸಿಸ್ತಾನೇ ಇರ್ಬೇಕು. ನಂಗೇನ್ ಬೇಜಾರಾಗಲ್ವ? ಬೆಳಿಗ್ನಿಂದ ಸಂಜೇವರ್ಗೂ ಮಾಡಿದ್ರೆ ಎಷ್ಟಮ್ಮ ಸಿಕ್ಕೋದು 3–4 ರೂ. ಆದ್ರೂ ನಂಗೇನಾದ್ರು ಹೊಸ ಲಂಗ ಕೊಡಿಸ್ತಾರಾ?

2 ನೇ ಮಗು:– ಅಮ್ಮಮ್ಮ ನನ್‌ಕೈ ನೋಡೆ ಎಷ್ಟು ಕಪ್ಪಾಗಿದೆ! ನಾನ್ ಹುಟ್ದಾಗ ಬೆಳ್ಳಗೇ ಇದ್ನಂತೆ. ರಾತ್ರಿ ಕೈಯೆಲ್ಲ ಉರಿ! ನೋಡೆ ಉಜ್ಜಿ, ಉಜ್ಜಿ, ಉಜ್ಜಿ ನನ್ಕೈಲಿ ಚರ್ಮ ಸುಲಿದ್ಹೋಗಿದೆ. ನೋಡು ಕೈಯೆಲ್ಲಾ ಉರಿ ಉರಿ ನಂ ಅಣ್ಣ ಕೈಯೆಲ್ಲ ಬೆಳ್ಳಗಿಟ್ಕಂಡವ್ನೆ ನನ್ಕೈನೇ ಯಾಕೆ ಯಾವಾಗ್ಲೂ ಕಪ್ಪಾಗ್ಬೇಕು?

3 ನೇ ಮಗು:- (ಜೋರಾಗಿ ಕೆಮ್ಮುತ್ತಲೇ ಮಾತನಾಡುತ್ತಾಳೆ)
ಇಂದೊಂದು ಪೀಡೆ, ಕೆಮ್ಮಿ ಕೆಮ್ಮಿ ಜೀವ ತಿಂತಾಳೆ ಅಂತಾರೆ ಬೀಡಿ ಕಟ್ಟೋದ್ ಬಿಡ್ಸೋಲ್ಲ, ಔಷ್ಧೀನೂ ಕೊಡ್ಸೋಲ್ಲ ಹೇಗಮ್ಮ ವಾಸಿಯಾಗುತ್ತೆ? ತಿನ್ನೋ ಅನ್ನದಲ್ಲೂ ಕೆಮ್ಮು, ಕುಡಿಯೋ ನೀರಲ್ಲೂ ಕೆಮ್ಮು. ಕೆಮ್ಮು, ಕೆಮ್ಮು, ಕೆಮ್ಮು...........

4 ನೇ ಮಗು:– (ನಗುವನ್ನಾಡಿಸುತ್ತಾ) ಏ! ಮುಚ್ಚೋ ಬಾಯ್ನ ತೆಗೆದುಬಿಟ್ಟ ರಾಗಾನಾ ಮಯೀ... ಅಂತಿರ್ತಾನೆ- ಎತ್ತಿ ಎತ್ತಿ ನನ್ಕೈಯೆಲ್ಲ ಬಿದ್ಹೋದವು. ನಿಮ್ಮಮ್ಮನ ಜೀವ ತಿನ್ನೋ ಅಂದ್ರೆ ನಂಜೀವಾನೇ ತಿಂತಾನೆ, ಹೊಡೆದ್ರೆ ನಿಮ್ಮಮ್ಮ ನನ್ನ ಬಿಡ್ತಾರಾ? ಏಯ್ ಮುಚ್ಚಲೇ ಬಾಯ್ನ (ಸುತ್ತ ಮುತ್ತ ನೋಡುತ್ತಾಳೆ) ಸಧ್ಯ! ಇವರಮ್ಮ ಇಲ್ಲಿಲ್ಲಪ್ಪ, ಬಂದ್ರೆ ಬಿಡ್ತಾರಾ ನನ್ನ?

ಉಳಿದ ಮಕ್ಕಳು ಎಲ್ಲರೂ ಒಟ್ಟಿಗೆ:– ಅಯ್ಯೋ! ಬಿಡ್ರಮ್ಮ ನಂದೂ ಇದೇ ಗೋಳು. ಕೆಲ್ಸ, ಕೆಲ್ಸ ಕೆಲ್ಸ. ಕುಂಟಾಪಿಲ್ಲೆ ಆಡೋ ಹಂಗಿಲ್ಲ, ಚೇಪೆಕಾಯಿ ಕೊಯ್ಯೋ ಹಂಗಿಲ್ಲ, ಮರಹತ್ತಿ ಜಿಗಿಯ್ಯೋ ಹಂಗಿಲ್ಲ. ಇನ್ನು ಇಸ್ಕೂಲಂತೂ ಗೋವಿಂದ, ಗೋವಿಂದ, ಗೋವಿಂದ.........

(ಹಿನ್ನೆಲೆಯಲ್ಲಿ ಹಾಡು)

(ಹಿನ್ನೆಲೆಯಲ್ಲಿ ಹಾಡು)

ಬಾಲೆಯರು ನಾವು ಹಾಡಿ ಕುಣಿಯುವ ವಯಸು
ನಮಗೇಕೆ ಇಂಥಾ ಪರಿತಾಪ!
ನಮಗೇಕೆ ಇಂಥಾ ಪರಿತಾಪ ಗೋವಿಂದ
ಎಲ್ಲಿ ಹೋದವು ನಮ್ಮ ಕನಸೆಲ್ಲಾ, ಎಲ್ಲಿ ಹೋದವು
ನಮ್ಮ ಕನಸೆಲ್ಲಾ.........?

(ಮಕ್ಕಳೆಲ್ಲ ಅಲ್ಲೇ ನಿದ್ದೆ ಹೋಗುತ್ತಾರೆ. ದೇವರ ರೂಪದ ಮನುಷ್ಯ ಕಾಣಿಸುತ್ತಾನೆ. ಅವನು ದೂರದಿಂದ ಮಂತ್ರದಂಡ ಬೀಸುತ್ತಾನೆ. ಮಗುವೊಂದು ಕಣ್ಣು ಬಿಡುತ್ತದೆ)

1 ನೇ ಮಗು:- (ಕಣ್ಣು ಉಜ್ಜುತ್ತಾ)...... ಏ! ತಿಮ್ಮಿ, ಏನೇ ಇದು! ನೋಡು, ನೋಡು ನಾನ್ ಲಟ್ಸಿಸ್ತಾ ಇದ್ದೆ ಅಲ್ಲ, ಆ ಲಟ್ಟಣಿಗೆ ಹಾರಿ ಹೋಗ್ತಾ ಇದೆ. ಏ! ನೋಡು ನೋಡು, ಅಮ್ಮ ನಾಳೆಯಿಂದ ನಾನು ಹಪ್ಪ ಲಟ್ಸೋಲ್ಲ ಕಣೆ! ನೋಡು, ಅಲ್ಲಿ ಆ ಹೂಗಳು ನೋಡು, ಅಯ್ಯೋ! ಆ ಚಿಟ್ಟೆಗಳ್ನ ನೋಡು, ಆ ಹಸಿರು ಚಿಟ್ಟೆಗಳು ಕಣೆ ಬಾ, ಬಾ...... ಹಿಡಿಯೋಣ ಬಾರೆ.........

2 ನೇ ಮಗು:– ಏ! ಅಮ್ಮಣ್ಣಿ ಇಲ್ಲಿ ಊದುಬತ್ತೀನೇ ಇಲ್ವಲ್ಲೆ. ನಂಗೂ ಕೆಲ್ಸ ಇಲ್ಲಪ್ಪ, ಏಯ್ ನೋಡೊ ಅಲ್ನೋಡು ಮರದ್ ತುಂಬಾ ಮಾವಿನಕಾಯಿ ಬಾರೆ, ಬಾರೆ ಹತ್ತಿ ಕೊಯ್ಯೋಣ ಬಾರೆ (ಸ್ಟಿಲ್)

3 ನೇ:– ಅಯ್ಯೋ! ನನ್ಕೈಲಿ ಬೊಬ್ಬೇನೆ ಇಲ್ಲ, ನೋಡು ನನ್ಕೈಲಿ ನೋವೂ ಇಲ್ಲ, ನೋಡು ಎಷ್ಟ್ ಬೆಳ್ಳಗಿದೆ. ಅಬ್ಬಾ ಅಲ್ಲಿ ದೊಡ್ಡ ನದಿ ಕಾಣ್ತಾ ಇದೆ ನೋಡು, ಈಜ್ ಹೊಡೆಯ್ಯೋಣಾ? (ಸ್ಟಿಲ್)

4 ನೇ ಮಗು:– ಅಯ್ಯೋ, ಇಲ್ಲಿ ಬೀಡೀನೇ ಇಲ್ವಲ್ಲಪ್ಪ! ಅರೆ! ಪುಸ್ತಕ ಬಂದ್ಬಿಟ್ಟದೆ! ಅಪ್ಪಾ, ನಾನೀಗ ಪುಸ್ತಕ ಓದ್ತೀನಿ, ಕೂತ್ಕೊಂಡು ಬರೀತೀನಿ ಗೊತ್ತಾ? (ಸ್ಟಿಲ್).

5 ನೇ ಮಗು:– ಅಪ್ಪಾ ಅಂತೂ ನನ್ನಡಕೆಗಳೂ ಮಾಯವಾದ್ವು! ಹಾಡ್ತಾ ಇರೋ ಹಕ್ಕಿ ಜೊತೆ, ಓಡ್ತಾ ಇರೋ ಮೋಡದ್ ಜೊತೆ ಹಾರ್ತೀನಿ, ಓಡ್ತೀನಿ, ಜಿಗೀತೀನಿ (ಸ್ಟಿಲ್)

(ಮಕ್ಕಳು ಖುಷಿಯಿಂದ ಹಾಡುತ್ತಾರೆ)

ನಾದಾರೇ......ಐಲೇಸಾ......ನಾದಾರೇ......
ಐಲೇಸಾ......
ಕುಣಿಯೋಣು ಬಾರೆ, ಕುಣಿಯೋಣು ಬಾರೆ
ಕುಣಿಯೋಣು ಬಾರೆ, ಕುಣಿಯೋಣು ಬಾರೆ
ಹಪ್ಪ್ಯಾಕ, ಬೀಡ್ಯಾಕ, ಆಡ್ಕ್ಯಾಕ, ಕೆಲ್ಸ್ಯಾಕ ಕುಣಿಯೋಣು
ಬಾರೆ, ಕುಣಿಯೋಣು ಬಾರೆ............
ಚಿಟ್ಟೇಯ ಹಿಡಿಯೋಣ, ಮರಹತ್ತಿ ಹಾಡೋಣ
ಕುಣಿಯೋಣು ಬಾರೆ, ಕುಣಿಯೋಣು ಬಾರೆ.........
ಹೊಳ್ಯಾಗೆ ಈಜೋಣ, ಓದುಬರಹ ಕಲಿಯೋಣ ಕುಣಿ
ಯೋಣು ಬಾರೆ.........ಕುಣಿಯೇಣು ಬಾರೆ............

ನಿರೂಪಕ: ಅರೆ! ಏನಪ್ಪ ಈ ಮಕ್ಳು ಕುಣಿತಾ ಇದಾವೆ? ಈ ಮಕ್ಳಿಗೂ ಕುಣ್ಯೋಕೆ ಗೊತ್ತಲ್ಲ! ಅಲ್ಲ ಈ ಮಕ್ಳು ಕೆಲ್ಸ ಮಾಡೋದ್ ಬಿಟ್ಟು ಹೀಗೆ ಕುಣಿಯೋ ಸ್ಥಿತೀಗೆ ಹೇಗ್ ಬಂದ್ವು? ನೀವೇನಾದ್ರೂ ಜಾದೂ ಮಾಡಿದ್ರಾ ಸ್ವಾಮಿ? ಅರೆ ನೀವ್ ಮಾಡಿದ್ರಾ? (ಸುತ್ತ ಮುತ್ತ ನೋಡಿ ಅಲ್ಲೇ ನಿಂತ ದೇವರನ್ನು ಕಾಣುತ್ತಾನೆ) ಹೋ! ಈ ದೇವ್ರಾ ಇದನ್ನೆಲ್ಲ ಮಾಡಿದ್ದು ಹ......ಹ್ಞೆ...... ಹ್ಞಂ......ದೇವ್ರು ಇಷ್ಟೆಲ್ಲಾ ಮಾಡ್ತಾನಾ ಸ್ವಾಮಿ? ಇದು ದೇವ್ರಲ್ಲ ಸ್ವಾಮಿ, ಮಕ್ಳ ಕನ್ಸು, ಇದು ಮಕ್ಳ ಕನ್ಸು ಸ್ವಾಮಿ ಕನ್ಸು. ಈ ಮಕ್ಳ ಕನ್ಸು ನನಸು ಮಾಡೋರು ಯಾರು ಸ್ವಾಮಿ? ದೇವ್ರಲ್ಲ ಸ್ವಾಮಿ ದೇವ್ರಲ್ಲ, ನಿಜ ಮಾಡ್ಬೇಕಾದವ್ರು ನಾವು ನೀವು ಸ್ವಾಮಿ. ನಾವು ನೀವು.

(ವಿಲಿಯಂ ಬ್ಲೇಕ್‌ನ " ಚಿಮ್ನಿ ಸ್ವೀಪರ್ಸ್ " ಪದ್ಯದಿಂದ ಪ್ರಭಾವಿತವಾದದ್ದು.)



ಅಕ್ಟೋಬರ್30 ರಂದು ನಡೆದ ರೇಖಾ ಬಿ. ಎನ್ ಜಗನ್ನಾಥ ರವರ ಹುಟ್ಟು ಹಬ್ಬದ ಪ್ರಯುಕ್ತ ಈ ವಿಶೇಷ ಸಂಚಿಕೆಯನ್ನು ಅವರು ಪ್ರಾಯೋಜಿಸಿದ್ದಾರೆ. ರೇಖಾರವರಿಗೆ-ಮಾನಸ ಬಳಗದ ವರಿಂದ ಹುಟ್ಟು ಹಬ್ಬದ ಹಾರ್ಧಿಕ ಶುಭಾಶಯಗಳು

---

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ, ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : " ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067